ಶ್ರೀ ರಾಮಕೃಷ್ಣ ಪರಮಹಂಸರ ಮಾನಸಿಕ ಪುತ್ರರಂತೆ ಇದ್ದ ಸ್ವಾಮಿ ಬ್ರಹ್ಮಾನಂದರ ಸಂಕಲನವಿದು.

ಪರಮಹಂಸರ ಉಪದೇಶ, ಆತ್ಮಸಾಕ್ಷಾತ್ಕಾರವನ್ನು ಪಡೆದ ಮಹಾಯೋಗಿಯ ಹೃದಯಾಂತರಾಳದಿಂದ ಚಿಮ್ಮಿಬಂದುವು. ಓದುಗರ ಹೃದಯಕ್ಕೆ ನೇರವಾಗಿ ಹಾರುವುವು. ಗ್ರಂಥಪೀಡನೆಯಿಲ್ಲ, ಪಾಂಡಿತ್ಯದ ಕ್ಲೇಶವಿಲ್ಲ. ಭಕ್ತಿ ಜ್ಞಾನ ವೈರಾಗ್ಯದ ಸವಿಯಿಂದ ತುಂಬಿ ತುಳುಕಾಡುತ್ತಿವೆ ಇವರ ಸರಳ ಸಂದೇಶ.

ಬೆಲೆ : ೧ ರೂ.

# ವಿವರ

---



ಶ್ರೀ ರಾಮಕೃಷ್ಣ ಪರಮಹಂಸ ದೇವರು

"ಈಶ್ವರಲಾಭವೇ ಮನುಷ್ಯ ಜೀವನದ ಉದ್ದೇಶ್ಯ"

# ಶ್ರೀ ಗುರುದೇವರ ವಚನ

## ಆತ್ಮಜ್ಞಾನ

೧. ಮೊದಲು ನಿನ್ನನ್ನು ನೀನು ತಿಳಿ. ಅನಂತರ ದೇವರನ್ನು ನೀನು ತಿಳಿಯುವೆ. ನನ್ನ ಅಹಂಕಾರ ಎಂದರೇನು? ಇದೇನು ನನ್ನ ಕೈಗಳೆ, ಕಾಲುಗಳೆ, ಮಾಂಸವೆ, ರಕ್ತವೆ, ಅಥವಾ ನನ್ನ ದೇಹದ ಮತ್ತಾವುದಾದರೂ ಅಂಗವೆ? ಸರಿಯಾಗಿ ಆಲೋಚನೆ ಮಾಡಿ ನೋಡು. ಆಗ 'ನಾನು' ಎಂಬ ಅಹಂಕಾರವಿಲ್ಲವೆಂದು ಗೊತ್ತಾಗುವುದು. ಈರುಳ್ಳಿಯ ಸಿಪ್ಪೆಯನ್ನು ಹೆಚ್ಚು ತೆರೆದಂತೆಲ್ಲ ಮತ್ತೂ ಹೆಚ್ಚು ಸಿಪ್ಪೆ ಕಾಣುವುದು. ಅದರಲ್ಲಿ ತಿರುಳು ಎಂಬುದೇನೂ ಕಾಣುವುದಿಲ್ಲ. ಅದರಂತೆಯೆ ನೀವು ಅಹಂಕಾರವನ್ನು ವಿಭಜನೆ ಮಾಡುತ್ತಾ ಹೋದರೆ ಅದು ಶೂನ್ಯದಲ್ಲಿ ಲಯವಾಗುವುದು. ಕೊನೆಗೆ ಏನು ಉಳಿಯುವುದೋ ಅದೇ ಶುದ್ಧ ಆತ್ಮಜ್ಞಾನ. ಅಹಂಕಾರ ಲಯವಾದಾಗ ದೇವರು ಕಾಣುವನು.

೨. ಎರಡು ತೆರದ ಅಹಂಕಾರಗಳಿವೆ—ಒಂದು ಮಾಗಿರುವುದು, ಮತ್ತೊಂದು ಕಾಯಾಗಿರುವುದು. ಯಾವ ಅಹಂಕಾರಕ್ಕೆ, ಇದು ನನ್ನ ಮನೆ, ನನ್ನ ಕೋಣೆ, ನನ್ನ ಮಗ ಎಂಬ ಭಾವನೆ ಇರುವುದೋ ಅದು ಇನ್ನೂ ಕಾಯಾದ ಅಹಂಕಾರ. ಯಾವ ಅಹಂಕಾರಕ್ಕೆ 'ನಾನು ದೇವರ ಸೇವಕ, ನಾನು ಅವನ ಮಗು, ನಿತ್ಯ ಮುಕ್ತನು ನಾನು, ಸರ್ವಜ್ಞನು ನಾನು' ಎಂಬ ಭಾವನೆ ಇರುವುದೋ ಅದು ಮಾಗಿದ ಅಹಂಕಾರ.

೩. ಯಾರೋ ಒಬ್ಬರು ಶ್ರೀರಾಮಕೃಷ್ಣರನ್ನು ತನಗೆ ಒಂದು ಮಾತಿನಲ್ಲಿ ಜ್ಞಾನವನ್ನು ಉಪದೇಶಿಸಿ ಎಂದು ಕೇಳಿಕೊಂಡರು. ಅದಕ್ಕೆ ಅವರು, "ಬ್ರಹ್ಮ ಒಂದೇ ಸತ್ಯ; ಜಗತ್ತು ಮಿಥ್ಯ, ಇದನ್ನು ಸಾಕ್ಷಾತ್ಕಾರ ಮಾಡಿಕೊಂಡು ಮೌನವಾಗಿರು" ಎಂದರು.

೪. ಒಬ್ಬ ಮನುಷ್ಯನಿಗೆ ದೇಹವಿರುವತನಕ ಅಹಂಕಾರ ಸಂಪೂರ್ಣವಾಗಿ ಅವನನ್ನು ಬಿಡುವುದಿಲ್ಲ; ಯಾವಾಗಲೂ ಅದರ ನೆರಳು ಸ್ವಲ್ಪ

ಇದ್ದೇ ಇರುವುದು. ತೆಂಗಿನ ಗಿಡದ ಗರಿಗಳು ಬೀಳುತ್ತವೆ, ಆದರೆ ಅವು ಹಿಂದೆ ತಮ್ಮ ಗುರುತನ್ನು ಯಾವಾಗಲೂ ಬಿಡುತ್ತವೆ. ಅದರಂತೆಯೆ ಒಬ್ಬನ ಅಹಂಕಾರವೂ ಕೂಡ. ಈ ಸ್ವಲ್ಪ ಅಹಂಕಾರ, ಆಗಲೇ ಯಾರು ಸಿದ್ಧರಾಗಿರುವರೋ ಅವರನ್ನು ಬಂಧಿಸುವುದಿಲ್ಲ.

೫. ಶ್ರೀರಾಮಕೃಷ್ಣರು ತೋತಾಪುರಿಯನ್ನು, 'ನಿನ್ನಷ್ಟು ಮುಂದುವರಿದಿರುವವನಿಗೆ ಧ್ಯಾನದ ಅವಶ್ಯಕತೆ ಏನಿದೆ?" ಎಂದು ಕೇಳಿದರು. ಅದಕ್ಕೆ ತೋತಾಪುರಿ "ಹಿತ್ತಾಳೆಯ ಪಾತ್ರೆಯನ್ನು ಪ್ರತಿದಿನವೂ ತಿಕ್ಕದೇ ಇದ್ದರೆ ಅದು ಮಂಕಾಗುವುದು. ಅದರಂತೆಯೆ ಪ್ರತಿ ದಿನವೂ ಧ್ಯಾನವಿಲ್ಲದೆ ಇದ್ದರೆ ಮನುಷ್ಯ ಶುದ್ಧವಾಗಿರುವುದಿಲ್ಲ" ಎಂದು ಉತ್ತರ ಕೊಟ್ಟನು. ಶ್ರೀರಾಮಕೃಷ್ಣರು "ಪಾತ್ರೆ ಚಿನ್ನದಿಂದ ಮಾಡಿದ್ದರೆ ಅದು ಮಂಕಾಗುವುದಿಲ್ಲ" ಎಂದು ಉತ್ತರ ಕೊಟ್ಟರು. ಯಾರು ದೇವರನ್ನು ನೋಡಿರುವರೋ ಅವರಿಗೆ ಧ್ಯಾನ ಜಪತಪಾದಿಗಳ ಅವಶ್ಯಕತೆ ಇಲ್ಲ.

೬. ಅನುಲೋಮ ಮತ್ತು ವಿಲೋಮ ಎಂಬ ಎರಡು ಬಗೆಯ ಯುಕ್ತಿ ಇವೆ. ತಿರುಳನ್ನು ಒಳಗೊಂಡಿರುವ ಚಿಪ್ಪಿನಂತೆ ಒಂದು; ತಿರುಳಿನ ಮೇಲೆ ಇರುವ ಚಿಪ್ಪಿನಂತೆ ಮತ್ತೊಂದು.

೭. ಅಹಂಕಾರದ ಭಾವನೆಯಲ್ಲಿ ಅನಹಂಕಾರವೂ ಇವೆ. ಯಾರಿಗೆ ಬೆಳಕಿನ ಭಾವನೆ ಇದೆಯೋ ಅವರಿಗೆ ಕತ್ತಲೆಯ ಭಾವನೆಯೂ ಇದೆ. ಯಾರಿಗೆ ಪಾಪದ ಭಾವನೆ ಇದೆಯೋ ಅವರಿಗೆ ಪುಣ್ಯದ ಭಾವನೆಯೂ ಇದೆ.

೮. ಕಾಲಿಗೆ ಎಕ್ಕಡವನ್ನು ಹಾಕಿಕೊಂಡಮೇಲೆ ನೀವು ಸುಲಭವಾಗಿ ಮುಳ್ಳಿನ ಮೇಲೆ ನಡೆಯಬಹುದು. ಆಧ್ಯಾತ್ಮಿಕ ಜ್ಞಾನದಿಂದ ಕೂಡಿದ ಮೇಲೆ ಮುಳ್ಳಿನಂತೆ ಇರುವ ಪ್ರಪಂಚದ ಮೇಲೆ ನಿರಾತಂಕವಾಗಿ ನಡೆಯಬಹುದು.

೯. ಯಾವಾಗಲೂ ತನ್ಮಯಾವಸ್ಥೆಯಲ್ಲಿ ಒಬ್ಬ ಸಾಧುವಿದ್ದನು. ಯಾರೊಂದಿಗೂ ಅವನು ಮಾತನಾಡುತ್ತಿರಲಿಲ್ಲ. ಅವನನ್ನು ಹುಚ್ಚನೆಂದು ತಿಳಿದುಕೊಂಡಿದ್ದರು. ಒಂದು ದಿನ ಹಳ್ಳಿಯಲ್ಲಿ ಭಿಕ್ಷವನ್ನು ತಂದ ಮೇಲೆ ಒಂದು ನಾಯಿಯ ಪಕ್ಕದಲ್ಲಿ ಕುಳಿತುಕೊಂಡು ಊಟ ಮಾಡಲು

ಮೊದಲು ಮಾಡಿದನು. ಸಾಧು ಒಂದು ತುತ್ತನ್ನು ತನ್ನ ಬಾಯಿಗೆ ಇಟ್ಟುಕೊಳ್ಳುವನು ಅನಂತರ ಮತ್ತೊಂದು ತುತ್ತನ್ನು ನಾಯಿಯ ಬಾಯಿಗೆ ಇಡುವನು. ಹೀಗೆ ಸಾಧು ಮತ್ತು ನಾಯಿ ದೊಡ್ಡ ಸ್ನೇಹಿತರ ಜೋಡಿಯಂತೆ ಊಟ ಮಾಡುತ್ತಿದ್ದರು. ಇದು ಒಂದು ವಿಚಿತ್ರ ದೃಶ್ಯವಾಗಿ ಜನರ ಗುಂಪೊಂದು ಅಲ್ಲಿ ಸೇರಿಯಿತು. ಪ್ರೇಕ್ಷಕರಲ್ಲಿ ಕೆಲವರು ಸಾಧುವನ್ನು ಹುಚ್ಚನೆಂದು ತಿಳಿದು ನಗಲು ಮೊದಲು ಮಾಡಿದರು. ಅದಕ್ಕೆ ಸಾಧು ನೀವು ನಗುವುದೇಕೆಂದು ಹೀಗೆಂದನು —

"ವಿಷ್ಣು ವಿಷ್ಣುವಿನೊಂದಿಗೆ ಕುಳಿತಿರುವನು,
ವಿಷ್ಣು ವಿಷ್ಣುವನ್ನು ಊಟಮಾಡಿಸುತ್ತಿರುವನು,
ಹ! ವಿಷ್ಣುವೆ ನೀನು ನಗುವುದೇತಕ್ಕೆ?
ಏನಿದೆಯೊ ಅದೆಲ್ಲವೂ ವಿಷ್ಣು ಮಯವೆ."

೧೦ ತನ್ನಿಂದ ಹೊರಗೆ ದೇವರನ್ನು ಹುಡುಕುವಂತೆ ಮಾಡಿಸುವುದು ಅಜ್ಞಾನ. ದೇವರು ತನ್ನಲ್ಲಿರುವನು ಎಂದು ಯಾವಾಗ ಗೊತ್ತಾಗುವುದೋ, ಅದೇ ಜ್ಞಾನ. ಯಾರಿಗೆ ಅದು ತನ್ನಲ್ಲಿದೆಯೋ (ಅಂದರೆ ದೇವರನ್ನು ತನ್ನಲ್ಲಿ ತಿಳಿಯುತ್ತಾರೆಯೋ), ಅದು ಅಲ್ಲಿಯೂ ಇದೆ. (ಅಂದರೆ ತನ್ನ ಮನಸ್ಸು ಆತನ ಪಾದಕಮಲದಲ್ಲಿಯೂ ಇದೆ)

---

# ಈಶ್ವರ

೧. ದೇವರು ಮನುಷ್ಯನಲ್ಲಿ ಹೇಗೆ ಇರುವನು ಗೊತ್ತಿದೆಯೆ? ಶ್ರೀಮಂತರ ಮನೆಯ ಹೆಂಗಸರು ಪರದೆಯ ಹಿಂದೆ ಇರುವಂತೆ ಇರುವನು. ಅವರು ಎಲ್ಲರನ್ನೂ ನೋಡಬಲ್ಲರು, ಆದರೆ ಯಾರೂ ಅವರನ್ನು ನೋಡಲಾರರು.

೨. ಬೆಳಕನ್ನು ಕೊಡುವುದು ದೀಪದ ಸ್ವಭಾವ. ಅದರ ಸಹಾಯದಿಂದ, ಕೆಲವರು ಅಡಿಗೆ ಮಾಡಬಹುದು, ಕೆಲವರು ಕಳ್ಳಪತ್ರಗಳನ್ನು

ಬರೆಯಬಹುದು, ಮತ್ತೆ ಕೆಲವರು ಭಾಗವತವನ್ನು ಓದಬಹುದು. ಅದು ಬೆಳಕಿನ ತಪ್ಪೆ? ಆದಕಾರಣ ಕೆಲವರು ಜನರ ಪವಿತ್ರ ನಾಮದಿಂದ ಮುಕ್ತಿಯನ್ನು ಸಂಪಾದಿಸಿದರೆ, ಮತ್ತೆ ಕೆಲವರು ಕಳ್ಳತನ ನಿರ್ವಿಘ್ನವಾಗಿ ನಡೆಯಲಿ ಎಂದು ಬೇಡಿಕೊಂಡರೆ, ಅದು ಅವನ ತಪ್ಪೆ?

೩. ನೀವು ಏನನ್ನು ಹುಡುಕುವಿರೋ ಅದು ನಿಮಗೆ ದೊರಕುತ್ತದೆ. ದೇವರು ಕಲ್ಪತರುವಿನಂತೆ. ಪ್ರತಿಯೊಬ್ಬರೂ ಏನನ್ನು ಅಪೇಕ್ಷಿಸುತ್ತಾರೆಯೋ ಅದನ್ನು ಅವನಿಂದ ಪಡೆಯುತ್ತಾರೆ. ಒಬ್ಬ ಬಡವನ ಮಗ ವಿದ್ಯಾವಂತನಾಗಿ ನ್ಯಾಯಶಾಸ್ತ್ರ ಓದಿ ನ್ಯಾಯಾಧಿಪತಿಯಾದರೆ, ತಾನು ಪರವಾಗಿಲ್ಲ ಚೆನ್ನಾಗಿರುವೆ, ಎಂದು ತಿಳಿದುಕೊಳ್ಳುತ್ತಾನೆ. ದೇವರೂ ಕೂಡ ಅವನ ಮಾತನ್ನೆ ಮರುಧ್ವನಿಸಿಕೊಡುತ್ತಾ, "ನೀನು ಹಾಗೆ ಇರು" ಎನ್ನುತ್ತಾನೆ. ಅನಂತರ ಅದೇ ನ್ಯಾಯಾಧಿಪತಿ ನಿವೃತ್ತನಾಗಿ ವಿರಾಮ ವೇತನವನ್ನು (Pension) ತೆಗೆದುಕೊಂಡಮೇಲೆ, ವಿಷಯಗಳನ್ನು ಅವುಗಳ ನಿಜಸ್ಥಿತಿಯಲ್ಲಿ ನೋಡುತ್ತಾನೆ. ಆಗ "ಈ ಪ್ರಪಂಚದಲ್ಲಿ ನಾನು ಏನು ಸಾರ್ಥಕ ಕೆಲಸಮಾಡಿದೆ?" ಎಂದು ಪ್ರಶ್ನೆಯನ್ನು ಹಾಕಿಕೊಳ್ಳುವನು. ದೇವರೂ ಕೂಡ ಅದೇ ಮಾತನ್ನು ಪ್ರತಿಧ್ವನಿಗೊಳಿಸಿ, "ಹೌದು, ನಿಜ, ನೀನು ಏನು ಮಾಡಿದೆ?" ಎನ್ನುತ್ತಾನೆ.

೪. ಸಾಕಾರ ದೇವರಿಗೂ ನಿರಾಕಾರ ದೇವರಿಗೂ ಏನೂ ಭೇದವಿಲ್ಲ. ಪರಮೇಶ್ವರನನ್ನು ಅಚಲನೆಂದು ಭಾವಿಸಿದಾಗ, ನಿರ್ಗುಣಬ್ರಹ್ಮನಾಗುತ್ತಾನೆ. ಅವನು ಸೃಷ್ಟಿಸ್ಥಿತಿಪ್ರಳಯ ಕಾರ್ಯಗಳಲ್ಲಿ ನಿರತನೆಂದು ಭಾವಿಸಿದಾಗ, ಸಾಕಾರ ಅಥವಾ ಶಕ್ತಿಯಾಗುತ್ತಾನೆ.

೫. ಒಂದು ದಿನ ದೇವರ ವಿಚಾರವಾಗಿ ಮಾತನಾಡುತ್ತಿದ್ದಾಗ, ಮಥುರನಾಥನು "ದೇವರೂ ಕೂಡ ಪ್ರಕೃತಿನಿಯಮಗಳಿಂದ ಬದ್ಧನಾಗಿರುವನು, ತನ್ನ ಇಚ್ಛೆ ಬಂದಂತೆ ನಡೆಯುವುದಕ್ಕೆ ಆಗುವುದಿಲ್ಲ" ಎಂದನು. ಅದಕ್ಕೆ ಶ್ರೀರಾಮಕೃಷ್ಣರು, "ಅದು ಹೇಗೆ? ತನ್ನ ಇಚ್ಛೆ ಬಂದಂತೆ ಅವನು ನಡೆಯುತ್ತಾನೆ. ತನ್ನ ಮನಸ್ಸಿಗೆ ಬಂದುದನ್ನು ಅವನು ಮಾಡಬಲ್ಲ" ಎಂದರು. ಮಥುರನಾಥನು, "ಬರೀ ತನ್ನ ಇಚ್ಛಾಮಾತ್ರದಿಂದ ಈ ಕೆಂಪು

ದಾಸವಾಳದ ಗಿಡದಲ್ಲಿ ಬಿಳೀ ದಾಸವಾಳದ ಹೂವು ಬಿಡುವಂತೆ ಮಾಡ ಬಲ್ಲನೆ?" ಎಂದನು. ಶ್ರೀರಾಮಕೃಷ್ಣರು "ನಿಜವಾಗಿಯೂ ಅವನು ಅದನ್ನು ಮಾಡಬಲ್ಲನು ಅವನ ಇಚ್ಛೆ ಬಂದರೆ ಈ ಕೆಂಪು ದಾಸವಾಳದ ಗಿಡ ಬಿಳಿಯ ಹೂವನ್ನು ಕೊಡಬಲ್ಲದು" ಎಂದರು. ಆದರೆ ಮಥುರನಾಥ ನಿಗೆ ಪೂರ್ತಿ ಸಮಾಧಾನವಾಗಲಿಲ್ಲ. ಸ್ವಲ್ಪ ದಿನದಲ್ಲಿ ದಕ್ಷಿಣೇಶ್ವರದ ತೋಟದಲ್ಲಿದ್ದ ಒಂದು ದಾಸವಾಳದ ಗಿಡದಲ್ಲಿ ಎರಡು ಹೂವುಗಳು ಬಿಟ್ಟವು. ಅದರಲ್ಲಿ ಒಂದು ಕೆಂಪು ಮತ್ತೊಂದು ಬಿಳುಪು. ಶ್ರೀರಾಮಕೃಷ್ಣರು ಆ ಎರಡು ಹೂವುಗಳೂ ಇದ್ದ ಕೊಂಬೆಯನ್ನು ಮಥುರನಾಥನ ಹತ್ತಿರ ತೆಗೆದುಕೊಂಡು ಹೋದರು. ಆತನಿಗೆ ಅತ್ಯಾಶ್ಚರ್ಯವಾಗಿ "ಅಪ್ಪ! ನಿನ್ನೊಂದಿಗೆ ನಾನು ಮತ್ತೊಮ್ಮೆ ವಾದಿಸುವುದಿಲ್ಲ"ವೆಂದನು.

೬. ಸಾಕಾರ ಮತ್ತು ನಿರಾಕಾರದೇವರ ವಿಚಾರವಾಗಿ ನಿನಗೆ ಏನಾದರೂ ಗೊತ್ತೆ? ಅದು ನೀರು ಮತ್ತು ಹಿಮದ ಗಡ್ಡೆಯಂತೆ ನೀರು ಘನೀಭೂತವಾಗಿ ಹಿಮದ ಗಡ್ಡೆಯಾದಾಗ ಅದಕ್ಕೆ ಒಂದು ಆಕಾರ ಬರುವುದು. ಅದೇ ಹಿಮದ ಗಡ್ಡೆ ಕರಗಿ ನೀರಾದರೆ ಆ ಆಕಾರವೆಲ್ಲ ಕರಗಿ ಮಾಯವಾಗುವುದು.

೭. ಮರಣಕಾಲವನ್ನು ಎದುರು ನೋಡುತ್ತಾ ಶರಪಂಜರದ ಮೇಲೆ ಮಲಗಿರುವ ಭೀಷ್ಮನ ಕಣ್ಣಿನಿಂದ ಕಂಬನಿ ಸುರಿಯುತ್ತಿತ್ತು. ಇದನ್ನು ನೋಡಿ ಅರ್ಜುನನು ಶ್ರೀಕೃಷ್ಣನನ್ನು ಕುರಿತು, "ಸಹೋದರನೆ, ಏನು ಆಶ್ಚರ್ಯವಿದು! ನನ್ನ ತಾತ ನಿತ್ಯಸತ್ಯಸಂಧನೂ, ಅಷ್ಟವಸುಗಳಲ್ಲಿ ಒಬ್ಬನೂ ಆಗಿದ್ದರೂ, ಮಾಯಾವಶನಾಗಿ ಅವನೂ ಕಣ್ಣಲ್ಲಿ ನೀರು ಸುರಿಸುತ್ತಿರು ವನು" ಎಂದನು. ಭಗವಂತ ಭೀಷ್ಮನಿಗೆ ಇದನ್ನು ಹೇಳಿದ ಮೇಲೆ ಭೀಷ್ಮರು ಹೀಗೆಂದರು. "ಹೇ! ಕೃಷ್ಣ! ಮಾಯಾವಶನಾಗಿ ನಾನು ಅಳುತ್ತಿಲ್ಲವೆಂಬುದು ನಿನಗೆ ಚೆನ್ನಾಗಿ ಗೊತ್ತಿದೆ ಸ್ವಲ್ಪವಾದರೂ ನಿನ್ನ ಲೀಲೆಯ ರಹಸ್ಯ ತಿಳಿಯಲಿಲ್ಲವಲ್ಲವೆಂಬುದೇ ನನ್ನ ಕಣ್ಣೀರಿಗೆ ಕಾರಣ. ಯಾವ ಭಗವಂತನ ನಾಮೋಚ್ಚಾರಣೆ ಮಾಡಿ ಮಾನವರು ಸರ್ವ ಕಷ್ಟ ಗಳಿಂದಲೂ ಪಾರಾಗುತ್ತಾರೆಯೋ ಅಂತಹ ಶ್ರೀಕೃಷ್ಣನೆ ಪಾಂಡವರಿಗೆ ಸಾರಥಿಯಾಗಿರುವನು, ಸ್ನೇಹಿತನಾಗಿರುವನು. ಆದರೂ ಅವರ ಕಷ್ಟಕ್ಕೆ ಮಿತಿಯಿಲ್ಲ!"

೮. ಕಾಶಿಗೆ ಮಥುರನಾಥನೊಂದಿಗೆ ಶ್ರೀರಾಮಕೃಷ್ಣರು ತೀರ್ಥ ಯಾತ್ರೆಗೆ ಹೊರಟರು. ಕಾಶಿಯಲ್ಲಿದ್ದಾಗ ಅವರು ತ್ರೈಲಿಂಗಸ್ವಾಮಿಗಳನ್ನು ಕಂಡರು. ಆಗ 'ದೇವರು ಒಬ್ಬನೇ, ಆದರೂ ಜನರೇಕೆ ಹಲವು ದೇವರ ಮಾತನ್ನು ಆಡುತ್ತಾರೆ' ಎಂದು ಕೇಳಿದರು. ಸ್ವಾಮಿಗಳು ಆಗ ಮೌನವನ್ನು ಆಚರಿಸುತ್ತಿದ್ದರು ಆದಕಾರಣವೇ ಅವರು ತಮ್ಮ ಒಂದು ಬೆರಳನ್ನು ಮೇಲೆತ್ತಿ ಧ್ಯಾನಮಗ್ನರಾದರು. ಧ್ಯಾನದಿಂದ ದೇವರು ಒಬ್ಬನೇ ಎಂದು ಗೊತ್ತಾಗುವುದೆಂದೂ, ವಾದಕ್ಕೆ ಕುಳಿತಾಗ ಐಕ್ಯತೆ ಮಾಯವಾಗಿ ಹಲವು ದೇವರ ಭಾವ ಬರುವುದೆಂದೂ ಇದರಿಂದ ತೋರುವಂತೆ ಸಲಹೆ ಕೊಟ್ಟರು.

೯. ಸಾಕಾರ ನಿರಾಕಾರ ದೇವರುಗಳೆರಡೂ ಬೇರೆ ಬೇರೆ ವ್ಯಕ್ತಿಗಳಲ್ಲ. ಯಾರು ಸಾಕಾರನೋ ಅವನು ನಿರಾಕಾರಿಯೂ ಆಗಿರುವನು. ಮೇರೆ ಇಲ್ಲದೆ ಸುತ್ತಲೂ ನೀರಿನಿಂದ ಕೂಡಿದ, ಎಲ್ಲಿ ನೋಡಿದರೂ ದಡವು ಕಾಣದಿರುವ ಸಾಗರವನ್ನು ಆಲೋಚಿಸಿ ನೋಡಿ ಅಲ್ಲೊಂದು ಇಲ್ಲೊಂದು ಕಡೆ ಶೈತ್ಯಾಧಿಕ್ಯದಿಂದ ನೀರ್ಗಲ್ಲಾಗಿ ತೇಲುತ್ತಿವೆ ಅದರಂತೆಯೇ, ಭಗವಂತನನ್ನು ಪೂಜಿಸುವವನ ಭಕ್ತಿ ಎಂಬ ಶೈತ್ಯಾಧಿಕ್ಯದ ಪ್ರಭಾವದಿಂದ ನಿರಾಕಾರನು ಸಾಕಾರನಾದಂತೆ ಅವನ ಮುಂದೆ ತೋರುತ್ತಾನೆ. ಪುನಃ ಸೂರ್ಯೋದಯವಾದ ಮೇಲೆ ಸಾಕಾರದೇವರು ನಿರಾಕಾರದಲ್ಲಿ ಕರಗಿ ಹೋಗುವನು.

---

# ಮಾಯೆ

೧. ಮಾಯೆಯ ಸ್ವಭಾವವೇನು ನಿಮಗೆ ಗೊತ್ತೆ ? ಕೊಳದ ನೀರಿನ ಮೇಲೆ ತೇಲುವ ಪಾಚಿಯಂತೆ. ನೀವು ಅದನ್ನು ಆಚೆಗೆ ತಳ್ಳಬಹುದು. ಆದರೆ ಅದು ನೀರಿನ ಮೇಲೆ ಪುನಃ ಬಂದು ಆವರಿಸುವುದು. ಅದರಂತೆಯೇ ನೀವು ಎಲ್ಲಿಯವರೆಗೆ ನಿಮ್ಮಲ್ಲಿ ವಿಚಾರ ಮಾಡುತ್ತೀರೋ ಅಲ್ಲಿಯವರೆಗೆ ಎಲ್ಲಾ ಚೆನ್ನಾಗಿರುವುದು. ಆದರೆ ಇದಾದ ತಕ್ಷಣವೆ ಪ್ರಾಪಂಚಿಕ ಬಯಕೆಗಳು ನಿಮ್ಮ ಮೇಲೆ ಮಾಯೆಯು ತೆರೆಯನ್ನು ಬೀಸುವುವು.

೨. ಹಾವಿಗೆ ಅದರ ಹಲ್ಲಿನಲ್ಲಿ ವಿಷವಿದೆ. ಆದರೆ ಅದರಿಂದ ಅದಕ್ಕೆ ತೊಂದರೆಯಾಗುವುದಿಲ್ಲ. ವಿಷ ಅದರ ಮೇಲೆ ಪರಿಣಾಮವನ್ನುಂಟು ಮಾಡುವುದಿಲ್ಲ ಅಥವಾ ಅದನ್ನು ಕೊಲ್ಲುವುದಿಲ್ಲ. ಅದು ಕಡಿಯಬಹುದಾದ ಮತ್ತೊಂದು ಪ್ರಾಣಿಗೆ ಅದು ವಿಷ. ಇದರಂತೆಯೇ ವ್ಯಾವಹಾರಿಕ ಜಗತ್ತು ದೇವರಲ್ಲಿ ಇದ್ದರೂ ಕೂಡ ಅವನು ಇದನ್ನು ಮೀರಿರುವನು. ವ್ಯಾವಹಾರಿಕ ಜಗತ್ತು ನಮಗೆ ಮಾತ್ರ ಇರುವಂತೆ ಕಾಣುವುದು.

೩. ಮಾಯೆಗೂ (ಸ್ವಾರ್ಥತೆ) ದಯೆಗೂ (ಪರೋಪಕಾರ) ಏನು ವ್ಯತ್ಯಾಸ? ಮಾಯೆ ಅಂದರೆ ತನ್ನ ನಂಟರು ಇಷ್ಟರುಗಳ ಮೇಲೆ–ತಾಯಿ ತಂದೆ, ಸಹೋದರರು, ಸಹೋದರಿಯರು, ಹೆಂಡತಿ, ಮಕ್ಕಳು, ತನ, ಸೋದರಳಿಯ ಮತ್ತು ಸೋದರಸೊಸೆ ಇವರ ಮೇಲೆ ಇರುವ ಆಸಕ್ತಿ ಮತ್ತು ಪ್ರೀತಿ. ದಯೆ ಎಂದರೆ ಎಲ್ಲರ ಮೇಲೆಯೂ ಸಮನಾಗಿರುವ ಪ್ರೇಮ. ದೇವರು ಎಲ್ಲರಲ್ಲಿಯೂ ಇರುವನು ಎಂಬ ಭಾವದಿಂದ ಇದು ಪ್ರಾಪ್ತವಾಗುವುದು.

೪. ಒಬ್ಬನನ್ನು ಪಿಶಾಚಿಯು ಮೆಟ್ಟಿಕೊಂಡಿದ್ದರೆ ಹಾಗೆ ತನ್ನನ್ನು ಮೆಟ್ಟಿಕೊಂಡಿದೆ ಎಂದು ಅವನಿಗೆ ಗೊತ್ತಾದರೆ, ತಕ್ಷಣವೇ ಅದು ಬಿಟ್ಟು ಹೋಗುವುದು. ಇದರಂತೆಯೇ ಮಾಯೆಗೆ ಒಳಪಟ್ಟ ಜೀವರು ತಾವು ಭ್ರಾಂತರಾಗಿರುವೆವು ಎಂದು ತಿಳಿದಾಗ ಮಾಯೆಯಿಂದ ಪಾರಾಗುವರು.

೫. ದೇವರನ್ನು ನಮ್ಮ ಕಣ್ಣಿಗೆ ಕಾಣದಂತೆ ಮಾಡಿರುವುದು ಮಾಯೆ ಎಂಬ ತೆರೆ. ಈ ಮಾಯಾ ತೆರೆಯನ್ನು ತೆಗೆಯುವ ತನಕ ನಾವು ಪರಮಾತ್ಮನನ್ನು ನೋಡಲಾರೆವು. ಉದಾಹರಣೆಗೆ ಲಕ್ಷ್ಮಣನಿಗಿಂತ ರಾಮ ಕೆಲವು ಹೆಜ್ಜೆ ಮುಂದಿರುವನು. ಸೀತೆ ಅವರ ಮಧ್ಯದಲ್ಲಿ ಇರುವಳು ಎಂದು ಇಟ್ಟುಕೊಳ್ಳೋಣ. ಇಲ್ಲಿ ರಾಮ ಪರಮಾತ್ಮ, ಲಕ್ಷ್ಮಣ ಜೀವಾತ್ಮ, ಸೀತೆ ಮಾಯೆ. ಸೀತೆ ಎಲ್ಲಿಯವರೆವಿಗೆ ಇಬ್ಬರ ಮಧ್ಯದಲ್ಲಿ ಇರುವಳೋ ಅಲ್ಲಿಯವರೆವಿಗೂ ಲಕ್ಷ್ಮಣ ರಾಮನನ್ನು ನೋಡಲಾರ. ಅವಳು ಸ್ವಲ್ಪ ಆಚೆಕಡೆ ನಿಂತಾಗ ಮಾತ್ರ ಲಕ್ಷ್ಮಣ ರಾಮನನ್ನು ನೋಡಬಲ್ಲ.

೬. ಮಾಯೆಯಲ್ಲಿ ಎರಡು ವಿಧ: ಒಂದು ದೇವರ ಕಡೆಗೆ ತೆಗೆದು

ಕೊಂಡು ಹೋಗುವುದು, (ವಿದ್ಯಾಮಾಯೆ) ಮತ್ತೊಂದು ದೇವರಿಗೆ ವಿರೋಧವಾಗಿ ತೆಗೆದುಕೊಂಡು ಹೋಗುವುದು (ಅವಿದ್ಯಾಮಾಯೆ). ವಿದ್ಯಾಮಾಯೆಯಲ್ಲಿ ಪುನಃ ಎರಡು ವಿಧಗಳಿವೆ ವಿವೇಕ ಮತ್ತು ವೈರಾಗ್ಯ, ಇವುಗಳ ಸಹಾಯದಿಂದ ಜೀವಾತ್ಮರು ಪರಮಾತ್ಮನಲ್ಲಿ ಶರಣಾಗತರಾಗುವರು. ಅವಿದ್ಯಾಮಾಯೆ ಆರು ವಿಧವಾಗಿರುವುದು. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಇಂತಹ ಅಹಂಕಾರ ನಾನು, ನನ್ನದು ಎಂಬ ಅಹಂಕಾರವನ್ನು ಹುಟ್ಟಿಸಿ ಮಾನವನನ್ನು ಪ್ರಪಂಚದಲ್ಲಿ ಕಟ್ಟಿಹಾಕುವುದು. ಆದರೆ ವಿದ್ಯಾಮಾಯೆ ಮೈದೋರಿದ ತಕ್ಷಣವೆ ಅವಿದ್ಯಾಮಾಯೆ ಸಂಪೂರ್ಣವಾಗಿ ನಾಶವಾಗುವುದು

೭. ಸೂರ್ಯ ಅಥವಾ ಚಂದ್ರನು ಚಂಚಲವಾಗಿರುವ ನೀರಿನಲ್ಲಿ ಪ್ರತಿಬಿಂಬಿಸುವುದಿಲ್ಲ. ಅದರಂತೆಯೆ ಮಾಯೆಯನ್ನು ಸಂಪೂರ್ಣವಾಗಿ ಹೋಗಲಾಡಿಸುವ ತನಕ, ಅಂದರೆ ನಾನು, ನನ್ನದು ಎಂಬ ಭಾವ ಹೋಗದೆ ಇರುವ ತನಕ ಈಶ್ವರನನ್ನು ನಾವು ಕಾಣಲಾರೆವು.

೮. ಸೂರ್ಯ ಜಗತ್ತಿಗೆ ಬೆಳಕನ್ನು ಕೊಡುವನು. ಆದರೆ ಒಂದು ಸಣ್ಣ ಮೋಡ ಸೂರ್ಯನನ್ನು ನಮಗೆ ಕಾಣದಂತೆ ಮಾಡುವುದು. ಅದರಂತೆಯೇ ಕೆಲಸಕ್ಕೆ ಬಾರದ ಮಾಯೆಯ ತೆರೆ ಸರ್ವವ್ಯಾಪಿಯಾದ, ಸರ್ವಸಾಕ್ಷಿ ಭೂತನಾದ, ಸಚ್ಚಿದಾನಂದ ಸ್ವರೂಪನನ್ನು ನಮಗೆ ಕಾಣಿಸದಂತೆ ತಡೆಯುವುದು.

೯. ನೀರಿನ ಮೇಲಿರುವ ಪಾಚಿಯನ್ನು ನೀವು ನೂಕಿದರೆ ಪುನಃ ಅದು ತನ್ನ ಸ್ಥಳಕ್ಕೇ ಬರುವುದು. ಇದರಂತೆಯೇ ನೀವು ಮಾಯೆಯನ್ನು ನೂಕಿದರೆ ಸ್ವಲ್ಪ ಕಾಲದಲ್ಲಿ ಪುನಃ ಅದು ಬರುವುದು. ಆದರೆ ಒಂದು ತೇಲುವ ಬೊಂಬನ್ನು ತಡೆಗಟ್ಟುವುದರಿಂದ ಅದು ಬರದಂತೆ ಮಾಡುವಂತೆ, ಜ್ಞಾನ ಮತ್ತು ಭಕ್ತಿಯಿಂದ ಪುನಃ ಮಾಯೆ ನಮ್ಮನ್ನು ಆವರಿಸಿಕೊಳ್ಳದಂತೆ ಮಾಡಿಕೊಳ್ಳಬಹುದು. ಇಂತಹ ಅಡಚಣೆಯನ್ನು ದಾಟಿ ಮಾಯೆ ಬರಲಾರದು. ಆಗ ಸಚ್ಚಿದಾನಂದ ಒಂದೇ ಗೋಚರಿಸುವುದು.

೧೦. ದಕ್ಷಿಣೇಶ್ವರ ದೇವರಸ್ಥಾನದ ವಾದ್ಯಶಾಲೆಯ ಮೇಲಿನ

ಕೋಣೆಯಲ್ಲಿ ಒಬ್ಬ ಸಾಧು ಕೆಲವು ಕಾಲ ವಾಸಿಸುತ್ತಿದ್ದನು. ಆತನು ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ತನ್ನ ಕಾಲವನ್ನೆಲ್ಲ ದೇವರ ಧ್ಯಾನದಲ್ಲಿ ಕಳೆಯುತ್ತಿದ್ದನು. ಒಂದು ದಿನ ಅಕಸ್ಮಾತ್ತಾಗಿ ಮೋಡ ಆಕಾಶದಲ್ಲಿ ಕವಿದುಕೊಂಡಿತು. ಕೆಲವು ಕಾಲದ ಮೇಲೆ ಒಂದು ಬಿರುಗಾಳಿ ಮೋಡವನ್ನು ಚದುರಿಸಿತು. ಸಾಧು ಕೋಣೆಯಿಂದ ಹೊರಗೆ ಬಂದು ಅಂಗಳದಲ್ಲಿ ನಗುತ್ತಾ ಕುಣಿದಾಡಲು ಮೊದಲುಮಾಡಿದನು. ಇದನ್ನು ನೋಡಿ ಶ್ರೀರಾಮಕೃಷ್ಣರು ಅವನನ್ನು ‘ನಿನ್ನ ಕೋಣೆಯಲ್ಲಿ ಅಷ್ಟೊಂದು ಮೌನವಾಗಿ ಕಾಲಕಳೆಯುತ್ತಿದ್ದವನು ಇಂದು ಸಂತೋಷದಿಂದ ಕುಣಿದಾಡುತ್ತ ಇಷ್ಟು ಆನಂದವಾಗಿರುವೆಯಲ್ಲ?” ಎಂದು ಪ್ರಶ್ನಿಸಿದರು. ಅದಕ್ಕೆ ಸಾಧು “ಈ ಜೀವನವನ್ನು ಕವಿದಿರುವ ಮಾಯೆಯ ಪ್ರಭಾವ ಹೀಗೆ. ಮೊದಲು ಶುಭ್ರವಾದ ಆಕಾಶವಿರುವುದು. ಅನಂತರ ಇದ್ದಕ್ಕೆ ಇದ್ದಂತೆಯೇ ಮೋಡ ಕವಿಯುವುದು. ಈಗ ಎಲ್ಲವೂ ಪುನಃ ಹಿಂದಿನಂತೆಯೆ ಶುಭ್ರವಾಗಿರುವುದು” ಎಂದನು.

---

# ಅವತಾರ

೧. ನದಿಯ ಮೇಲೆ ತೇಲುವ ಒಂದು ದೊಡ್ಡ ದೋಣಿ ನೂರಾರು ಜನರನ್ನು ಹೊತ್ತುಕೊಂಡು ಹೋಗುವುದು. ಆದರೂ ಮುಳುಗುವುದಿಲ್ಲ. ಅದೇ ನದಿಯಲ್ಲಿ ತೇಲುತ್ತಿರುವ ಒಂದು ಸಣ್ಣ ಮರದ ತುಂಡಿನ ಮೇಲೆ ಒಂದು ಕಾಗೆ ಕುಳಿತುಕೊಂಡರೂ ಅದು ಮುಳುಗಿ ಹೋಗುವುದು. ಇದರಂತೆಯೆ ಅವತಾರ ಜನ್ಮವೆತ್ತಿದಾಗ ಅವನ ದಯೆಯಿಂದ ನೂರಾರು ಜನ ಮುಕ್ತಿಯನ್ನು ಪಡೆಯುವರು. ಸಿದ್ಧಪುರುಷನಾದರೊ ತುಂಬಾ ಕಷ್ಟದಿಂದ ತನ್ನನ್ನು ಮಾತ್ರ ತಾನು ಉದ್ಧಾರಮಾಡಿಕೊಳ್ಳಬಲ್ಲ.

೨. ರೈಲ್ವೆ ಯಂತ್ರ ತಾನು ಗುರಿಯನ್ನು ಮುಟ್ಟುವುದಲ್ಲದೆ, ಆದರೊಂದಿಗೆ ಸಾಮಾನು ತುಂಬಿದ ಹಲವು ಗಾಡಿಗಳನ್ನೂ ಎಳೆದುಕೊಂಡು ಹೋಗುವುದು. ಇದರಂತೆಯೆ ಅವತಾರ ಪುರುಷರು ಅನೇಕ ಜನರನ್ನು ದೇವರೆಡೆಗೆ ಕರೆದೊಯ್ಯುವರು.

# ಹಲವು ಬಗೆ ಮನುಷ್ಯರು

೧. ಮನುಷ್ಯ ಒಂದು ದಿಂಬಿನ ಚೀಲದಂತೆ. ಒಂದು ದಿಂಬಿನ ಚೀಲ ಕೆಂಪು, ಮತ್ತೊಂದು ಕಪ್ಪು ಇತ್ಯಾದಿಯಾಗಿರಬಹುದು. ಆದರೆ ಎಲ್ಲಾ ದಿಂಬುಗಳಲ್ಲಿರುವುದೂ ಒಂದೇ ತರಹದ ಹತ್ತಿ. ಇದರಂತೆಯೇ ಮನುಷ್ಯನೂ ಕೂಡ ಒಬ್ಬ ಸುಂದರನಾಗಿರಬಹುದು. ಮತ್ತೊಬ್ಬನು ಕುರೂಪಿಯಾಗಿರಬಹುದು: ಮೂರನೆಯವನು ಸಾಧುವಾಗಿರಬಹುದು, ಮತ್ತೊಬ್ಬನು ದುಷ್ಟನಾಗಿರಬಹುದು ಆದರೆ ಪರಮಾತ್ಮನು ಎಲ್ಲರಲ್ಲಿಯೂ ವಾಸಿಸುತ್ತಿರುವನು.

೨. ಎರಡು ಬಗೆಯ ಮನುಷ್ಯರು ನಮಗೆ ಸಾಧಾರಣವಾಗಿ ಕಾಣುವರು. ಒಬ್ಬರ ಸ್ವಭಾವ ಧಾನ್ಯಗಳನ್ನು ಕೇರುವ ಮರದಂತೆ ಇರುವುದು, ಮತ್ತೊಬ್ಬರದು ಜರಡಿಯಂತೆ ಇರುವುದು ಕೇರುವ ಮರ ಜಳ್ಳನ್ನು ತೂರಿ ಕಾಳನ್ನು ಹೇಗೆ ಇಟ್ಟುಕೊಳ್ಳುವುದೊ ಅದರಂತೆಯೆ ಒಂದು ಬಗೆಯ ಮನುಷ್ಯರು ಕೆಲಸಕ್ಕೆ ಬಾರದ ಕಾಮಕಾಂಚಗಳನ್ನು ತೂರಿ ಪಡೆಯುವುದಕ್ಕೆ ಯೋಗ್ಯವಾದ ದೇವರೊಬ್ಬನನ್ನೇ ಇಟ್ಟುಕೊಳ್ಳುತ್ತಾರೆ. ಜರಡಿಯು ಪದಾರ್ಥಗಳನ್ನು ಶೋಧಿಸಿ ಕೆಲಸಕ್ಕೆ ಬಾರದುದನ್ನು ಇಟ್ಟುಕೊಳ್ಳುವಂತೆ, ಮತ್ತೊಂದು ಬಗೆಯ ಜನರು ಪಡೆಯುವುದಕ್ಕೆ ಯೋಗ್ಯವಾದುದನ್ನು ಬಿಟ್ಟು ಕೆಲಸಕ್ಕೆ ಬಾರದ ಕಾಮಕಾಂಚನಗಳನ್ನು ಇಟ್ಟುಕೊಳ್ಳುತ್ತಾರೆ.

೩. ಪ್ರಾಪಂಚಿಕ ಮನಸ್ಸು ನೊಣದಂತೆ ಯಾವಾಗಲೂ ಹೇಸಿಗೆಯ ಮೇಲೆ ಇರುವುದನ್ನೇ ಪ್ರೀತಿಸುವುದು. ಮತ್ತಾವುದನ್ನೂ ಅದು ಪ್ರೀತಿಸುವುದಿಲ್ಲ. ಸುವಾಸನೆಯಾದ ಕಮಲದೊಳಗೆ ನೊಣವನ್ನು ಬಲವಂತದಿಂದ ಬಿಟ್ಟರೆ ಅದರ ಮನಸ್ಸಿಗೆ ಹಿತವಾಗುವುದಿಲ್ಲ. ಇದರಂತೆಯೇ ಪ್ರಾಪಂಚಿಕ ಸ್ವಭಾವದವರು ಪ್ರಾಪಂಚಿಕ ವಸ್ತುಗಳನ್ನಲ್ಲದೆ ಬೇರೆ ಏನನ್ನೂ ಮಾತನಾಡಲು ಇಚ್ಛಿಸುವುದಿಲ್ಲ. ಜನರು ದೇವರ ಮತ್ತು ಅವನಿಗೆ ಸಂಬಂಧಪಟ್ಟ ಮಾತುಗಳನ್ನು ಆಡುತ್ತಿರುವ ಸ್ಥಳದಿಂದ ಅವರು ಬಿಟ್ಟು ಹೋಗುವರು. ಕೆಲಸಕ್ಕೆ ಬಾರದ ಹರಟೆ ಹೊಡೆಯುವ ಸ್ಥಳಕ್ಕೆ ಹೋದಾಗ ಅವರ ಮನಸ್ಸಿಗೆ ಸಮಾಧಾನ.

೪. ಬಲೆಯಲ್ಲಿ ಮೀನುಗಳು ಬಿದ್ದಾಗ ಕೆಲವು ಒದ್ದಾಡುವುದೇ ಇಲ್ಲ. ಸುಮ್ಮನೇ ಇರುವುವು. ಮತ್ತೆ ಕೆಲವು ತಪ್ಪಿಸಿಕೊಳ್ಳಲು ಒದ್ದಾಡಿ ಕೊನೆಗೆ ಸುಮ್ಮನಾಗುವುವು. ಆದರೆ ಮೂರನೇ ಗುಂಪಿನವು ಒದ್ದಾಡಿ ಕೊನೆಗೆ ಬಲೆಯನ್ನು ತೂತುಮಾಡಿಕೊಂಡು ಹೋಗುವುವು ಇದರಂತೆಯೆ ಪ್ರಪಂಚದಲ್ಲಿ ಮೂರು ಬಗೆಯ ಜನರಿರುವರು ಬದ್ಧರು, ಮುಮುಕ್ಷುಗ ಳಾಗಲು ಯತ್ನಿಸುತ್ತಿರುವವರು ಮತ್ತು ಮುಕ್ತರು.

೫. ಬೆಸ್ತಳೊಬ್ಬಳು ಊರಿಗೆ ಹಿಂತಿರುಗುತ್ತಿದ್ದಾಗ ಕತ್ತಲಾಗಿ ದೊಡ್ಡಮಳೆ ಬಂದಿತು. ಆಗ ಒಬ್ಬ ಹೂವಾಡಿಗನ ಮನೆಯಲ್ಲಿ ಅವಳು ತಂಗಿದಳು. ಹೂವಾಡಿಗನು ಅವಳನ್ನು ಬಹಳ ಆದರದಿಂದ ಬರಮಾಡಿ ಕೊಂಡು, ರಾತ್ರಿಯನ್ನು ಹೂವು ಇಟ್ಟಿದ್ದ ಪಡಸಾಲೆಯಲ್ಲಿ ಕಳೆಯ ಬಹುದು ಎಂದು ಹೇಳಿದನು. ಇಷ್ಟು ಚೆನ್ನಾದ ಸ್ಥಳದಲ್ಲಿ ಅವಳಿದ್ದರೂ ಅವಳಿಗೆ ನಿದ್ದೆ ಬರಲಿಲ್ಲ ಸುತ್ತಲೂ ಇದ್ದ ಹೂವಿನ ಗಿಡದಿಂದ ಬರುತ್ತಿದ್ದ ಸುವಾಸನೆಯಿಂದ ಅವಳಿಗೆ ನಿದ್ದೆ ಬರಲಿಲ್ಲವೆಂದು ಕೊನೆಗೆ ಕಂಡು ಹಿಡಿದಳು. ಆಗ ಅವಳು ಖಾಲಿಯಾದ ಮೀನಿನ ಬುಟ್ಟಿಯೊಳಗೆ ಸ್ವಲ್ಪ ನೀರನ್ನು ಚುಮುಕಿಸಿ ಅದನ್ನು ಮೂಗಿನ ಹತ್ತಿರ ಇಟ್ಟುಕೊಂಡಳು. ಸ್ವಲ್ಪ ಹೊತ್ತಿನಲ್ಲೇ ಚೆನ್ನಾಗಿ ನಿದ್ದೆ ಹತ್ತಿತು. ಇದರಂತೆಯೇ ಪ್ರಾಪಂಚಿಕ ಸ್ವಭಾವದ ಮನುಷ್ಯರೂ ಕೂಡ. ಅವರಿಗೂ ಕೆಲಸಕ್ಕೆ ಬಾರದ ದುರ್ಗಂಧದಿಂದ ಕೂಡಿದ ವಸ್ತುಗಳಲ್ಲದೆ ಮತ್ತೇನೂ ರುಚಿಸು ವುದಿಲ್ಲ.

೬. ಪ್ರಾಪಂಚಿಕ ಮನುಷ್ಯನೊಂದಿಗೆ ಮಾತನಾಡಿದರೆ ಅವನ ಮನಸ್ಸು ಪ್ರಾಪಂಚಿಕ ಬಯಕೆಗಳು ಮತ್ತು ಆಲೋಚನೆಗಳಿಂದ ತುಂಬಿ ತುಳುಕಾಡುತ್ತಿರುವುದೆಂದು ತೋರುವುದು. ಸಣ್ಣ ಹಕ್ಕಿಯ ಹಿಕ್ಕೆಯು ಅದು ತಿಂದ ಧಾನ್ಯದಿಂದ ಕೂಡಿರುವಂತೆ, ಇಂತಹ ಸ್ವಭಾವದ ಜನ ಬಯಸುವುದೇ ಪ್ರಾಪಂಚಿಕ ವಿಷಯಗಳನ್ನು. ಅವರು ಧಾರ್ಮಿಕ ವಿಷಯ ಗಳನ್ನು ಕೇಳಲು ಇಚ್ಛಿಸುವುದಿಲ್ಲ.

೭. ಎರಡು ತರಹ ನೊಣಗಳಿವೆ. ಒಂದು ಜೇನುನೊಣ. ಅದು ಜೇನನ್ನು ಮಾತ್ರ ಹೀರುವುದು. ಮತ್ತೊಂದು ಸಾಧಾರಣ ನೊಣ.

ಅದು ಜೇನನ್ನು ಮಾತ್ರ ಕುಡಿಯುವುದಿಲ್ಲ ಸಮಯಬಿದ್ದರೆ ಕೆಟ್ಟಗಾಯದ ಮೇಲೂ ಕೂಡುವುದು. ಇದರಂತೆಯೇ ಮನುಷ್ಯರೂ ಕೂಡ ಯಾರು ದೇವರನ್ನು ಪ್ರೀತಿಸುತ್ತಾರೆಯೊ ಅವರು ದೇವರಲ್ಲದೆ ಮತ್ತಾವ ವಿಷಯ ಗಳನ್ನೂ ಮಾತನಾಡುವುದಿಲ್ಲ. ಆದರೆ ಯಾರಿಗೆ ಪ್ರಾಪಂಚಿಕ ವಸ್ತುಗಳ ಮೇಲೆ ಆಸಕ್ತಿ ಇದೆಯೊ ಅವರು ಇದುವರೆವಿಗೂ ಕೇಳುತ್ತಿದ್ದ ದೇವರ ವಿಚಾರವನ್ನು ಬಿಟ್ಟು ಕಾಮಕಾಂಚನ ಮಾತನ್ನು ಮೊದಲು ಮಾಡಿದರೆ, ತಕ್ಷಣವೆ ಅದನ್ನು ಕೇಳಲು ಪ್ರಾರಂಭಿಸುವರು.

೮. ಪ್ರಾಪಂಚಿಕ ವಿಷಯಗಳಲ್ಲಿ ಮಗ್ನನಾದವನ ಸ್ವಭಾವವೇ ನೆಂದರೆ, ತಾನು ಧಾರ್ಮಿಕ ಪ್ರವಚನ ಭಜನೆ ಮುಂತಾದುವನ್ನು ಕೇಳದೆ ಇರುವುದು ಮಾತ್ರವಲ್ಲ, ಉಳಿದವರು ಇದನ್ನು ಕೇಳುವುದನ್ನೂ ತಡೆಯು ತ್ತಾನೆ. ಧರ್ಮ, ಧಾರ್ಮಿಕಪುರುಷರು ಇವರನ್ನು ನಿಂದಿಸುತ್ತಾನೆ. ದೇವರನ್ನು ಧ್ಯಾನಮಾಡುವವರನ್ನು ನೋಡಿ ಅಣಕಿಸುತ್ತಾನೆ.

೯. ಮೊಸಳೆಗೆ ಯಾವ ಶಸ್ತ್ರವೂ ಕೂಡ ಭೇದಿಸಲಾರದಂತಹ ಚರ್ಮವಿದೆ. ಅದರಂತೆಯೇ ಪ್ರಾಪಂಚಿಕ ವಿಷಯದಲ್ಲಿ ನಿರತನಾದವನಿಗೆ ನೀವು ಧಾರ್ಮಿಕ ವಿಷಯಗಳನ್ನು ಎಷ್ಟು ಹೇಳಿದರೂ ಅದು ಅವನ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡುವುದಿಲ್ಲ.

೧೦. ಸೂರ್ಯನ ರಶ್ಮಿಯು ಎಲ್ಲಾ ಕಡೆಯಲ್ಲಿಯೂ ಬೀಳುತ್ತದೆ. ಆದರೆ ಎಲ್ಲಿ ಅದು ನೀರು, ಕನ್ನಡಿ, ನುಣುಪಾದ ಲೋಹ ಮುಂತಾದು ವುಗಳ ಮೇಲೆ ಬೀಳುತ್ತದೆಯೊ ಆ ಮಧ್ಯವರ್ತಿ ಮಾತ್ರ ಸೂರ್ಯರಶ್ಮಿ ಯನ್ನು ಪ್ರತಿಬಿಂಬಿಸುತ್ತದೆ. ಇದರಂತೆಯೇ ದೇವರು ಎಲ್ಲಾ ಕಡೆಯಲ್ಲಿ ಇದ್ದರೂ ಯಾರು ಶುದ್ಧಾತ್ಮರೊ ಅವರಲ್ಲಿ ಮಾತ್ರ ವ್ಯಕ್ತನಾಗುತ್ತಾನೆ.

೧೧. ಅನೇಕ ಕಡಬುಗಳು ನೋಡಲು ಒಂದೇಯಾಗಿ ಕಾಣ ಬಹುದು. ಆದರೆ ಅದರಲ್ಲಿ ಹಲವು ಬಗೆಯ ಹೂರಣಗಳು ಇರಬಹುದು. ಕೆಲವದರಲ್ಲಿ ತೆಂಗಿನ ಕಾಯಿಯ ಹೂರಣ, ಕೆಲವದರಲ್ಲಿ ಖೋವ ಇತ್ಯಾದಿ. ಇದರಂತೆಯೇ ಮನುಷ್ಯನ ದೇಹವೆಲ್ಲ ಒಂದೇ ಬಗೆಯ ವಸ್ತುವಿನಿಂದ ಆಗಿದ್ದರೂ ಮನುಷ್ಯರು ತಮ್ಮ ಗುಣಗಳಿಗೆ ತಕ್ಕಂತೆ ಬೇರೆ ಬೇರೆಯಾಗಿ ಕಾಣುವರು.

೧೨. ನೀರೆಲ್ಲ ನಾರಾಯಣ. ಆದರೆ ಎಲ್ಲಾ ವಿಧದ ನೀರೂ ಕುಡಿಯಲು ಯೋಗ್ಯವಲ್ಲ. ಇದರಂತೆಯೇ ದೇವರು ಸರ್ವ ವ್ಯಾಪಿಯಾಗಿದ್ದರೂ, ಎಲ್ಲಾ ಸ್ಥಳವೂ ದರ್ಶನಕ್ಕೆ ಯೋಗ್ಯವಲ್ಲ. ಕೆಲವು ನೀರನ್ನು ಕಾಲುತೊಳೆಯುವುದಕ್ಕೆ ಉಪಯೋಗಿಸಬಹುದು; ಕೆಲವನ್ನು ಬಾಯಿಮುಕ್ಕಳಿಸುವುದಕ್ಕೆ, ಮೂರನೆಯದನ್ನು ಕುಡಿಯುವುದಕ್ಕೆ; ಮತ್ತೊಂದನ್ನು ಮುಟ್ಟಲೂ ಕೂಡ ಯೋಗ್ಯವಲ್ಲ. ಇದರಂತೆಯೇ ಕೆಲವು ಸ್ಥಳ ದರ್ಶನಕ್ಕೆ ಯೋಗ್ಯ ಮತ್ತೆ ಕೆಲವಕ್ಕೆ ದೂರದಿಂದಲೇ ನಿಂತು ನಮಸ್ಕಾರ ಮಾಡಬೇಕು.

೧೩. ದೇವರು ಹುಲಿಯಲ್ಲಿಯೂ ಇರುವನು ಎಂಬುದೇನೋ ನಿಜ. ಆದರೆ ನಾವು ಅದರ ಹತ್ತಿರ ಹೋಗಬಾರದು. ಇದರಂತೆಯೇ ಅತಿ ದುಷ್ಟನಲ್ಲಿಯೂ ಕೂಡ ದೇವರು ಇರುವನು ಎಂಬುದೇನೊ ನಿಜ. ಆದರೆ ಅವರೊಂದಿಗೆ ಸಂಬಂಧವನ್ನು ಬೆಳೆಸುವುದು ಯೋಗ್ಯವಲ್ಲ.

೧೪. ಒಬ್ಬ ಗುರು ಎಲ್ಲರೂ ನಾರಾಯಣನ ಸ್ವರೂಪ ಎಂದು ಬೋಧಿಸಿದನು. ಶಿಷ್ಯನು ಅಕ್ಷರಶಃ ಇದನ್ನು ನಿಜವೆಂದು ತಿಳಿದುಕೊಂಡನು. ಒಂದು ದಿನ ಶಿಷ್ಯ ದಾರಿಯಲ್ಲಿ ಒಂದು ಆನೆಯನ್ನು ಕಂಡನು. ಅದು ಇವನ ಕಡೆಗೆ ಓಡಿಬರುತ್ತಿತ್ತು. ಮೇಲಿದ್ದ ಮಾಹುತನು ದೂರ ಹೋಗು, ದೂರಹೋಗು ಎಂದು ಕೂಗುತ್ತಿದ್ದನು. ಶಿಷ್ಯನು ಮನಸ್ಸಿನಲ್ಲಿ ಹೀಗೆ ಆಲೋಚಿಸುತ್ತಿದ್ದ. ನಾನೇಕೆ ಆಚೆಗೆ ಹೋಗಬೇಕು, ನಾನೂ ನಾರಾಯಣ ಆನೆಯೂ ನಾರಾಯಣ, ನಾರಾಯಣನಿಂದ ನಾರಾಯಣನಿಗೆ ಏನು ಅಂಜಿಕೆ!" ಹೀಗೆ ಆಲೋಚಿಸುತ್ತ ದಾರಿಯನ್ನು ಬಿಡಲಿಲ್ಲ. ಕೊನೆಗೆ ಆನೆಯು ತನ್ನ ಸೊಂಡಲಿನಿಂದ ಅವನನ್ನು ಹಿಡಿದು ಪಕ್ಕಕ್ಕೆ ಎಸೆಯಿತು. ಅವನಿಗೆ ತುಂಬಾ ವ್ಯಥೆಯಾಯಿತು. ಹೋಗಿ ಗುರುವಿಗೆ ಈ ಸಂಗತಿಯನ್ನೆಲ್ಲ ಹೇಳಿದನು. ಅದಕ್ಕೆ ಗುರು "ಮಗು! ನೀನು ಹೇಳಿದ್ದೇನೊ ಸರಿ. ನೀನು ನಾರಾಯಣ, ಆನೆಯೂ ನಾರಾಯಣ; ಆದರೆ ನಿನ್ನನ್ನು ದೂರ ಹೋಗು ಎಂದ ಮಾಹುತ ನಾರಾಯಣನ ಎಚ್ಚರಿಕೆಯನ್ನು ಏತಕ್ಕೆ ಗಮನಕ್ಕೆ ತೆಗೆದುಕೊಳ್ಳಲಿಲ್ಲ?" ಎಂದನು.

೧೫. ಸತ್ಪುರುಷರ ಕೋಪವೆನ್ನುವುದು ನೀರಿನಮೇಲೆ ಬರೆದ ಗೆರೆಯಂತೆ. ಬೇಗ ಅಳಿಸಿಹೋಗುವುದು.

೧೬. ಬ್ರಾಹ್ಮಣನ ಮಗ ನಿಸ್ಸಂದೇಹವಾಗಿಯೂ ಜಾತಿಯಲ್ಲಿ ಬ್ರಾಹ್ಮಣನೆ. ಆದರೆ ಅವರಲ್ಲಿ ಕೆಲವರು ದೊಡ್ಡ ವಿದ್ಯಾವಂತರಾಗುವರು, ಪುರೋಹಿತರಾಗುವರು, ಕೆಲವರು ಅಡಿಗೆಯವರಾಗುವರು, ಮತ್ತೆ ಕೆಲವರು ಸೂಳೆಯರ ಮನೆಯ ಮುಂದೆ ನೆಲದ ಮೇಲೆ ಹೊರಳಾಡುವರು.

೧೭. ಒರೆಗಲ್ಲಿನಿಂದ ಹಿತ್ತಾಳೆಗೂ ಚಿನ್ನಕ್ಕೂ ಇರುವ ವ್ಯತ್ಯಾಸ ತಿಳಿಯಬಹುದು. ಇದರಂತೆಯೇ ಒಬ್ಬನ ಸ್ವಭಾವ ಕಪಟವೆ ಅಥವಾ ಸತ್ಯವೆ ಎಂಬುದನ್ನು ದೇವರು ಪರೀಕ್ಷಿಸುವನು.

೧೮. ಮನುಷ್ಯರಲ್ಲಿ ಎರಡು ವಿಧ. ಹೆಸರಿಗೆ ಮಾತ್ರ ಮನುಷ್ಯರು ಮತ್ತು ಪ್ರಾಜ್ಞರಾದಂತಹವರು. ಯಾರು ದೇವರಿಗಾಗಿ ಹಂಬಲಿಸುವರೋ ಅವರು ಕೊನೆಯ ಗುಂಪಿಗೆ ಸೇರಿದವರು ಯಾರು ಕಾಮಕಾಂಚನಗಳನ್ನು ಮಾತ್ರ ಆಶಿಸುತ್ತಾರೆಯೋ ಅವರು ಸಾಧಾರಣ ಮನುಷ್ಯರು.

೧೯. ಪ್ರಾಪಂಚಿಕರನ್ನು ಯಾವುದೂ ಜಾಗ್ರತರನ್ನಾಗಿ ಮಾಡುವುದಿಲ್ಲ. ಈ ಜೀವನದಲ್ಲಿ ದುಃಖ ಕಷ್ಟಗಳೇನೂ ಅವರಿಗೆ ಕಡಿಮೆಯಿಲ್ಲ. ಆದರೂ ಅವರು ಇದರಿಂದ ಸ್ವಲ್ಪವೂ ಬುದ್ಧಿವಂತರಾಗುವುದಿಲ್ಲ. ಒಂಟೆಯನ್ನು ನೋಡಿ. ಅದಕ್ಕೆ ಮುಳ್ಳಿನ ಗಿಡ ಕಂಡರೆ ತುಂಬ ಇಷ್ಟ. ಬಾಯಿಯಿಂದ ರಕ್ತ ಸುರಿಯುತ್ತಿದ್ದರೂ ಅದು ತಿನ್ನುವುದನ್ನು ಬಿಡುವುದಿಲ್ಲ. ಅಂತೆಯೇ ಇವರು ಎಂತಹ ವಿಪತ್ತು ಬಂದರೂ ಪರಿಗಣಿಸುವುದಿಲ್ಲ. ಸ್ವಲ್ಪ ದಿನಗಳಲ್ಲಿ, ಹಿಂದೆ ಏನೂ ಸಂಭವಿಸಲಿಲ್ಲವೆಂದು ತಿಳಿಯುವರು.

ಈ ವಿಷಯಗಳಲ್ಲಿ ಎಚ್ಚರಿಕೆಯಿಂದಿರು: (೧) ನೀರಿನಂತೆ ಸರಾಗವಾಗಿ ಮಾತನಾಡುವವನು. (೨) ಏನನ್ನೂ ಮಾತನಾಡದೆ ಮೌನವಾಗಿರುವವನು. (೩) ಕಿವಿಯಮೇಲೆ ತುಳಸಿ ಪತ್ರವನ್ನು ಇಟ್ಟುಕೊಂಡು ತನ್ನ ಭಕ್ತಿಯನ್ನು ಹೊರಗೆ ಪ್ರದರ್ಶಿಸುವವನು. (೪) ದೊಡ್ಡ ಮುಸುಕನ್ನು ಇಳಿ ಬಿಟ್ಟುಕೊಂಡ ಹೆಂಗಸು. (೫) ಪಾಚಿಯಿಂದ ತುಂಬಿದ ಕೊಳದ ನೀರು—ತುಂಬಾ ಅನಾರೋಗ್ಯಕರವಾದುದು.

# ಗುರು

೧. ಗುರು ಒಬ್ಬನೆ. ಆದರೆ ಉಪಗುರುಗಳು ಹಲವು ಮಂದಿ ಇರಬಹುದು. ಉಳಿದವರಿಂದ ನಾವು ಏನನ್ನಾದರೂ ಕಲಿತುಕೊಳ್ಳು ವುದಕ್ಕೆ ಉಪಗುರುಗಳೆಂದು ಹೆಸರು ಭಾಗವತದಲ್ಲಿ ಬರುವ ಹೆಸರು ವಾಸಿಯಾದ ಅವಧೂತರಿಗೆ ಇಪ್ಪತ್ತು ನಾಲ್ಕು ಉಪಗುರುಗಳಿದ್ದರೆಂದು ಹೇಳಿದೆ.

೨. ಒಂದು ದಿನ ಅವಧೂತನು ಹುಲ್ಲಿನ ಮೆದೆಯ ಹತ್ತಿರ ಹೋಗುತ್ತಿದ್ದಾಗ ತನ್ನ ಸಮೀಪಕ್ಕೆ ಒಂದು ಮದುವೆಯ ಮೆರವಣಿಗೆ ರಭಸ ವಾದ್ಯಧ್ವನಿಯೊಡಗೂಡಿ ವಿಜೃಂಭಣೆಯಿಂದ ಬರುತ್ತಿರುವುದನ್ನು ಕಂಡನು. ತನ್ನ ಸಮೀಪದಲ್ಲಿಯೆ ಬೇಡನೊಬ್ಬನು ಮೃಗದ ಮೇಲೆ ಗುರಿಯಿಡುವುದರಲ್ಲಿ ನಿರತನಾಗಿದ್ದನು. ವಾದ್ಯಧ್ವನಿ, ಮತ್ತು ವಿಜೃಂಭಣೆಯ ಕಡೆ ಒಂದುಸಲವಾದರೂ ಕಣ್ಣೆತ್ತಿ ನೋಡಲಿಲ್ಲ. ಅವಧೂತನು ಬೇಟೆಗಾರ ನಿಗೆ ನಮಸ್ಕರಿಸುತ್ತ "ಅಯ್ಯ! ನೀನು ನನಗೆ ಗುರು. ನಾನು ಧ್ಯಾನಕ್ಕೆ ಕುಳಿತಾಗ, ಈಗ ನೀನು ಬೇಟೆಯಾಡುವ ಮೃಗದ ಮೇಲೆ ಮನಸ್ಸಿಟ್ಟಿರು ವಂತೆ ನನ್ನ ಮನಸ್ಸು ಏಕಾಗ್ರವಾಗಲಿ" ಎಂದನು.

೩. ಬೆಸ್ತನೊಬ್ಬನು ಒಂದು ಕೊಳದಲ್ಲಿ ಮೀನನ್ನು ಹಿಡಿಯು ತ್ತಿದ್ದನು. ಅವಧೂತನು ಅವನ ಸಮೀಪಕ್ಕೆ ಬಂದು "ಅಣ್ಣಾ! ಆ ಊರಿಗೆ ರಸ್ತೆ ಯಾವುದು?" ಎಂದು ಕೇಳಿದನು. ಗಾಣಕ್ಕೆ ಕಟ್ಟಿದ್ದ ಬೆಂಡು, ಗಾಣವನ್ನು ಇನ್ನೇನು ಮೀನು ತಿನ್ನುತ್ತಿದೆ ಎಂಬುದನ್ನು ತೋರುತ್ತಿತ್ತು. ಆದಕಾರಣ ಅವನು ಇವನಿಗೆ ಯಾವ ಉತ್ತರವನ್ನೂ ಹೇಳಲಿಲ್ಲ. ತನ್ನ ಗಾಣದ ಮೇಲೆ ಮನಸ್ಸನ್ನೆಲ್ಲ ಏಕಾಗ್ರಮಾಡಿದ್ದನು. ಮೊದಲು ಮೀನನ್ನು ಹಿಡಿದಾಗ ಮೇಲೆ ತಿರುಗಿ ನೋಡಿ "ನೀನು ಏನು ಹೇಳು ತ್ತಿದ್ದೆ?" ಎಂದು ಕೇಳಿದನು. ಅವಧೂತನು ಅವನಿಗೆ ನಮಸ್ಕಾರ ಮಾಡಿ "ಅಯ್ಯ! ನೀನು ನನಗೆ ಗುರು. ನಾನು ನನ್ನ ಇಷ್ಟದೇವತೆಯ ಮೇಲೆ ಧ್ಯಾನಮಾಡುವಾಗ ನಿನ್ನ ಉದಾಹರಣೆಯನ್ನು ಅನುಸರಿಸುವಂತೆ ಪ್ರಯತ್ನಿಸುವೆನು. ನನ್ನ ಧ್ಯಾನ ಪೂರ್ತಿಯಾಗುವವರೆಗೆ ಮತ್ತಾವ ಕೆಲಸದ ಮೇಲೂ ಮನಸ್ಸು ಹೋಗದಿರಲಿ" ಎಂದನು.

೪. ಕೊಕ್ಕಿನಲ್ಲಿ ಒಂದು ಮೀನನ್ನು ಹಿಡಿದುಕೊಂಡಿದ್ದ ಹದ್ದನ್ನು ನೋಡಿ, ಇತರ ಹದ್ದುಗಳೂ, ಕಾಗೆಗಳೂ ಅದನ್ನು ಹಿಂಬಾಲಿಸುತ್ತ ಅದನ್ನು ಕುಕ್ಕಿ ಅದರ ಬಾಯಲ್ಲಿದ್ದ ಮೀನನ್ನು ಕಸಿದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದುವು. ಯಾವ ದಿಕ್ಕಿನಲ್ಲಿ ಅದು ಹೋದರೂ ಅದರ ಹಿಂಸಕರು ಅದನ್ನು ಅನುಸರಿಸಿದುವು. ಅನಂತರ ಬೇಜಾರಿನಿಂದ ಮೀನನ್ನು ಕೆಡಹುವಂತೆ ಮಾಡಿದುವು. ಮತ್ತೊಂದು ಹದ್ದು ಆ ಮೀನನ್ನು ಹಿಡಿಯಿತು. ತಕ್ಷಣವೆ ಗುಂಪು ಅದರ ಕಡೆಗೆ ತಿರುಗಿತು. ಮೊದಲನೆ ಹದ್ದನ್ನು ಸುಮ್ಮನೆ ಬಿಟ್ಟವು. ಅದು ಸುಮ್ಮನೆ ಒಂದು ಮರದ ಕೊಂಬೆಯ ಮೇಲೆ ಕುಳಿತುಕೊಂಡಿತು ಈ ಹಕ್ಕಿಯ ಶಾಂತವಾದ ಸಮಾಧಾನಸ್ಥಿತಿಯನ್ನು ಕಂಡು ಅವಧೂತನು ಅದಕ್ಕೆ ನಮಸ್ಕಾರ ಮಾಡುತ್ತ ಹೀಗೆಂದನು: "ನೀನು ನನ್ನ ಗುರು. ಒಬ್ಬನು ತನ್ನ ಉಪಾಧಿಗಳನ್ನು ಬಿಟ್ಟಾಗ ಮಾತ್ರ ಚಿತ್ತಶಾಂತಿ ಸಾಧ್ಯ. ಇಲ್ಲದೇ ಇದ್ದರೆ ಹೆಜ್ಜೆಹೆಜ್ಜೆಗೂ ಅಪಾಯ ತಪ್ಪದು ಎಂಬುದನ್ನು ನೀನು ನನಗೆ ಕಲಿಸಿದೆ"

೫. ಒಂದು ಬಕ ಮೀನನ್ನು ಹಿಡಿಯುವುದಕ್ಕಾಗಿ ಕೆಸರಿನ ಮೇಲೆ ನಿಧಾನವಾಗಿ ಹೋಗುತ್ತಿತ್ತು. ಹಿಂದೆ ಬೇಡನೊಬ್ಬ ಅದನ್ನು ಹೊಡೆಯುವುದಕ್ಕೆ ಬಾಣದಿಂದ ಗುರಿಯಿಡುತ್ತಿದ್ದನು. ಆದರೆ ಹಕ್ಕಿಗೆ ಸ್ವಲ್ಪವೂ ಇದರ ಲಕ್ಷ್ಯವಿರಲಿಲ್ಲ. ಅವಧೂತ ಆ ಬಕಕ್ಕೆ ನಮಸ್ಕರಿಸುತ್ತ "ನಾನು ಧ್ಯಾನಕ್ಕೆ ಕುಳಿತಾಗ ನನ್ನ ಹಿಂದೆ ಯಾರು ಇರುವರು ಎಂಬುದನ್ನು ನೋಡದೆ ನಿನ್ನ ಆದರ್ಶವನ್ನು ಅನುಸರಿಸೋಣ" ಎಂದನು.

೬. ಅವಧೂತನಿಗೆ ಜೇನುನೊಣದಲ್ಲಿ ಇನ್ನೊಬ್ಬ ಗುರು ಸಿಕ್ಕಿದನು. ಜೇನುನೊಣ ತುಂಬಾ ಕಷ್ಟಪಟ್ಟು ಹಲವು ದಿನಗಳಿಂದ ಜೇನನ್ನು ಕೂಡಿಡುತ್ತಿತ್ತು. ಎಲ್ಲಿಂದಲೋ ಒಬ್ಬ ಮನುಷ್ಯನು ಬಂದು ಜೇನುಗೂಡನ್ನು ಕಿತ್ತು ಜೇನುತುಪ್ಪವನ್ನು ಕುಡಿದುಬಿಟ್ಟನು. ಜೇನುನೊಣಕ್ಕೆ ತನ್ನ ದೀರ್ಘಪ್ರಯತ್ನದ ಫಲವನ್ನು ಅನುಭವಿಸುವ ಭಾಗ್ಯವಿರಲಿಲ್ಲ. ಇದನ್ನು ನೋಡಿ ಅವಧೂತನು ಜೇನುನೊಣಕ್ಕೆ ನಮಸ್ಕಾರ ಮಾಡುತ್ತ ಹೀಗೆಂದನು, "ಸ್ವಾಮಿ, ನೀನೇ ನನಗೆ ಗುರು. ಸಂಪಾದಿಸಿಟ್ಟ ಆಸ್ತಿ ನಿಜವಾಗಿ ಹೇಗೆ ಕೊನೆಗಾಣುವುದು ಎಂಬುದನ್ನು ನಾನು ನಿನ್ನಿಂದ ಕಲಿತೆ."

೭. ಸಾವಿರಾರು ಜನ ಗುರುಗಳು ಸಿಕ್ಕುತ್ತಾರೆ. ಆದರೆ ಶಿಷ್ಯನೊಬ್ಬ ಸಿಕ್ಕುವುದು ದುರ್ಲಭ ಎನ್ನುವುದು ಹಿಂದಿನ ನಾಣ್ಣುಡಿ. ಒಳ್ಳೆಯ ಬುದ್ಧಿವಾದವನ್ನು ಕೊಡುವವರು ಹಲವು ಮಂದಿ. ಆದರೆ ಅದನ್ನು ಅನುಸರಿಸುವವರು ಅತಿ ವಿರಳ.

೮. ಒಬ್ಬನಿಗೆ ನಿಜವಾಗಿಯೂ ದೇವರ ಮೇಲೆ ಭಕ್ತಿಹುಟ್ಟಿ, ಪೂಜೆ ಜಪ ಧ್ಯಾನಗಳನ್ನು ಮಾಡಬೇಕೆಂಬ ಆಸೆ ಇದ್ದರೆ ದೇವರು ಅವನಿಗೆ ಬೇಕಾದ ಗುರುವನ್ನು ನಿಜವಾಗಿ ಒದಗಿಸಿಯೇ ಒದಗಿಸುವನು. ಈ ವಿಚಾರದಲ್ಲಿ ಯಾವ ಚಿಂತೆಯನ್ನೂ ಮಾಡಬೇಕಾಗಿಲ್ಲ.

೯. ವೈದ್ಯರಲ್ಲಿ ಮೊದಲನೆಯವರು, ಎರಡನೆಯವರು ಮತ್ತು ಮೂರನೆಯವರು ಎಂದು ಮೂರು ವಿಧ. ಮೂರನೆ ತರಗತಿಯ ವೈದ್ಯ ರೋಗಿಯ ನಾಡಿಯನ್ನು ಪರೀಕ್ಷೆಮಾಡಿ ಯಾವುದಾದರೂ ಔಷಧಿ ಯನ್ನಾದರೂ ತೆಗೆದುಕೊ ಎಂದು ಹೇಳುವನು. ಅನಂತರ ಅವನು ಹೊರಟು ಹೋಗುವನು. ರೋಗಿ ನಿಜವಾಗಿ ಔಷಧವನ್ನು ತೆಗೆದು ಕೊಂಡನೆ ಇಲ್ಲವೆ ಎನ್ನುವುದನ್ನು ವಿಚಾರಿಸುವುದಕ್ಕೂ ಇಚ್ಛಿಸುವುದಿಲ್ಲ. ಎರಡನೆ ವಿಧದ ವೈದ್ಯ ಔಷಧವನ್ನು ಉಪಯೋಗಿಸಿದರೆ ಗುಣಮುಖ ವಾಗುತ್ತೀಯೇ ಎಂದು ರೋಗಿಗೆ ಹೇಳಿ ತನ್ನ ಕೈಲಾದ ಒಳ್ಳೆಯ ಪ್ರಯತ್ನವನ್ನೆಲ್ಲ ಮಾಡಿ ಇಚ್ಛೆಯಿಲ್ಲದ ರೋಗಿ ಔಷಧವನ್ನು ತೆಗೆದು ಕೊಳ್ಳುವಂತೆ ಮಾಡಲು ಯತ್ನಿಸುವನು. ಮೊದಲನೆ ವೈದ್ಯನು ರೋಗಿಯು ಯಾವ ಔಷಧವನ್ನೂ ತೆಗೆದುಕೊಳ್ಳುವುದಿಲ್ಲವೆಂದು ಹಠತೊಟ್ಟಿರುವಾಗ, ಅವನ ಎದೆಯ ಮೇಲೆ ಕಾಲಿಟ್ಟು ಔಷಧಿಯನ್ನು ಬಲವಂತದಿಂದ ರೋಗಿಗೆ ಕುಡಿಸುವುದಕ್ಕೆ ಹಿಂತೆಗೆಯುವುದಿಲ್ಲ. ಇದರಂತೆಯೆ ಯಾವ ಗುರು ತನ್ನ ಶಿಷ್ಯನಿಗೆ ಉಪದೇಶ ಕೊಟ್ಟ ಮೇಲೆ ಯಾವುದನ್ನೂ ವಿಚಾರಿ ಸುವುದಿಲ್ಲವೊ ಅವನು ಮೂರನೆ ಬಗೆಯವನು. ಶಿಷ್ಯನ ಮೇಲ್ಮೆಗಾಗಿ ಅವನಿಗೆ ತಿಳಿಯುವತನಕ ಪದೇ ಪದೇ ಯಾವ ಗುರು ಒತ್ತಿ ಹೇಳುವನೋ ಅವನು ಎರಡನೆಯ ವೈದ್ಯ. ಶಿಷ್ಯ ತಾನು ಹೇಳಿದುದನ್ನು ಚೆನ್ನಾಗಿ ಕೇಳು ವುದಿಲ್ಲ ಮತ್ತು ಅನುಸರಿಸುವುದಿಲ್ಲ ಎಂಬುವನ್ನು ನೋಡಿ, ಬಲಾತ್ಕಾರ ದಿಂದ ಹೇಳಿದಂತೆ ಕೇಳುವಂತೆ ಮಾಡುವವನು ಮೊದಲನೆ ವಿಧದ ವೈದ್ಯ.

---

# ಸಾಕ್ಷಾತ್ಕಾರವೆ ಧರ್ಮ, ಚರ್ಚೆಯಲ್ಲ

೧. ಎಲ್ಲಿಯವರೆಗೆ ಒಬ್ಬನು ಶಾಸ್ತ್ರಗಳಲ್ಲಿರುವುದನ್ನು ಚರ್ಚಿಸ ಬೇಕು ? ದೇವರನ್ನು ಕಾಣುವತನಕ. ಹೂವಿನ ಮೇಲೆ ಕುಳಿತುಕೊಳ್ಳುವ ತನಕ ಜೇನುಹುಳು ಶಬ್ಧಮಾಡುವುದು. ಮಕರಂದವನ್ನು ಹೀರಲು ಮೊದಲು ಮಾಡುತ್ತಲೆ ಶಬ್ಧವೆಲ್ಲ ನಿಲ್ಲುವುದು.

೨. ಒಂದು ದಿನ ಗತಿಸಿದ ಮಾನ್ಯ ಕೇಶವಚಂದ್ರಸೇನನು ಶ್ರೀ ರಾಮಕೃಷ್ಣರನ್ನು ದಕ್ಷಿಣೇಶ್ವರ ದೇವಸ್ಥಾನದಲ್ಲಿ ಕಂಡು ಹೀಗೆ ಪ್ರಶ್ನೆ ಮಾಡಿದನು : "ಅನೇಕ ಪಂಡಿತರು ಬೇಕಾದಷ್ಟು ಶಾಸ್ತ್ರಗಳನ್ನು ಓದು ತ್ತಾರೆ. ಆದರೂ ಅವರು ಆಧ್ಯಾತ್ಮಿಕ ವಿಚಾರದಲ್ಲಿ ಏನನ್ನೂ ತಿಳಿಯ ದವರು, ಇದಕ್ಕೆ ಕಾರಣವೇನು ?" ಅದಕ್ಕೆ ಶ್ರೀರಾಮಕೃಷ್ಣರು ಈ ರೀತಿ ಹೇಳಿದರು : "ರಣಹದ್ದು ಆಕಾಶದ ಮೇಲೆ ಹಾರುತ್ತದೆ. ಆದರೆ ಅದರ ದೃಷ್ಟಿಯೆಲ್ಲಾ ಕೊಳೆತು ನಾರುವ ದೇಹಗಳು ಬಿದ್ದಿರುವ ಗುಂಡಿಯ ಕಡೆಗೆ. ಪಂಡಿತರೆಂದು ಜಂಭ ಕೊಚ್ಚಿಕೊಳ್ಳುವವರ ಮನಸ್ಸೆಲ್ಲ ಪ್ರಾಪಂಚಿಕ ವಸ್ತುಗಳಲ್ಲಿ ಆಸಕ್ತವಾಗಿರುವುದು ಆದಕಾರಣವೆ ಅವರು ನಿಜವಾದ ಜ್ಞಾನವನ್ನು ಪಡೆಯಲಾರರು. ಬೇಕಾದಷ್ಟು ಧರ್ಮಗ್ರಂಥ ಗಳನ್ನು ಓದುವುದರಿಂದ ಅವರಿಗೆ ಏನು ಪ್ರಯೋಜನವಾಗುವುದು ?"

೩. ಶ್ರೀರಾಮಕೃಷ್ಣರು ಗ್ರಂಥಗಳನ್ನೆಲ್ಲ ಅಷ್ಟು ಗ್ರಂಥಿಗಳೆಂದು ಹೇಳುತ್ತಿದ್ದರು. ಅಂದರೆ ವಿವೇಕ ಮತ್ತು ವೈರಾಗ್ಯವಿಲ್ಲದೆ ಸುಮ್ಮನೆ ಪುಸ್ತಕಗಳನ್ನು ಓದುವುದರಿಂದ ಒಬ್ಬರ ಅಹಂಕಾರ ಮತ್ತು ದರ್ಪವನ್ನು ಅದು ಹೆಚ್ಚಿಸುತ್ತದೆ. ಇದು ಒಬ್ಬನ ಮನಸ್ಸಿನಲ್ಲಿರುವ ಗ್ರಂಥಿಯನ್ನು ಇನ್ನೂ ಹೆಚ್ಚು ಮಾಡುವುದು.

೪. ಒಂದು ದಿನ ಶ್ರೀ ರಾಮಕೃಷ್ಣರು ಚರ್ಚೆ ಮಾಡುವುದರಲ್ಲಿ ತುಂಬಾ ಆಸಕ್ತನಾದವನಿಗೆ ಹೀಗೆ ಹೇಳಿದರು : "ಒಂದು ಮಾತಿನಿಂದ ನಿನಗೆ ತೃಪ್ತಿ ಬೇಕಾದರೆ ನನಲ್ಲಿಗೆ ಬಾ. ಹೆಚ್ಚು ಕಾಲ ವಾದಮಾಡಿ ಕೊನೆಗೆ ಸತ್ಯವನ್ನು ತಿಳಿದುಕೊಳ್ಳಬೇಕಾದರೆ ಕೇಶವಚಂದ್ರಸೇನನ ಹತ್ತಿರ ಹೋಗು."

೫. ನೀರಿನ ಕೊಡ ತುಂಬುತ್ತಿರುವಾಗ ಅದರ ಧ್ವನಿ ಕೇಳುವುದು. ಅದು ತುಂಬಿದ ತಕ್ಷಣವೆ ಧ್ವನಿ ನಿಲ್ಲುವುದು. ಇದರಂತೆಯೆ ಯಾರು ದೇವರನ್ನು ಕಂಡಿಲ್ಲವೊ ಅವರು ದೇವರ ವಿಚಾರವಾಗಿ ಬೇಕಾದಷ್ಟು ವಾದ ಮಾಡುವರು. ಆದರೆ ಯಾರು ಆತನನ್ನು ನೋಡಿರುವರೋ ಅವರು ಮೌನವಾಗಿ ಆ ಪರಮಾನಂದವನ್ನು ಅನುಭವಿಸುವರು.

೬. ವಿವೇಕ ವೈರಾಗ್ಯಗಳಿಲ್ಲದೆ ಸುಮ್ಮನೆ ಶಾಸ್ತ್ರಗಳನ್ನು ಓದಿ ಪ್ರಯೋಜನವಿಲ್ಲ. ಇವುಗಳಿಲ್ಲದೆ ನಾವು ಮುಂದುವರಿಯಲಾರೆವು. ವಿವೇಕವೆಂದರೆ ನಿತ್ಯ ಅನಿತ್ಯ ವಸ್ತುವನ್ನು ವಿಮರ್ಶಿಸಿ ನಿತ್ಯವನ್ನೇ ಹಿಡಿಯುವುದು. ಆತ್ಮ ದೇಹೇಂದ್ರಿಯಗಳಿಗಿಂತ ಬೇರಾದವನು ಎಂಬ ಜ್ಞಾನವೂ ಕೂಡ ವಿವೇಕ. ಪ್ರಾಪಂಚಿಕವಸ್ತುಗಳ ಮೇಲೆ ಇರುವ ಅನಾಸಕ್ತಿಯೇ ವೈರಾಗ್ಯ.

೭. ಹಿಂದೂಗಳ ಪಂಚಾಂಗದಲ್ಲಿ ಇಪ್ಪತ್ತು ಕೊಳಗ ಮಳೆ ಬರುತ್ತದೆ ಎಂದು ಬರೆದಿರುತ್ತದೆ. ಇಷ್ಟೊಂದು ಮಳೆ ಬರುತ್ತದೆ ಎಂದು ಹೇಳಿರುವ ಪಂಚಾಂಗವನ್ನು ಹಿಂಡಿದರೆ ಒಂದು ತೊಟ್ಟು ನೀರು ಬರುವುದಿಲ್ಲ. ಇದರಂತೆ ಶಾಸ್ತ್ರದಲ್ಲಿ ಎಷ್ಟೊ ಒಳ್ಳೆಯ ಬುದ್ಧಿವಾದ ಇರುತ್ತವೆ. ಆದರೆ ಸುಮ್ಮನೆ ಇವನ್ನು ಓದುವುದರಿಂದ ಒಬ್ಬನು ಒಳ್ಳೆಯವನಾಗಲಾರ. ಅವುಗಳಲ್ಲಿ ಹೇಳಿರುವಂತೆ ಅಭ್ಯಾಸ ಮಾಡಬೇಕು.

೮. ಇಬ್ಬರು ಒಂದು ತೋಟಕ್ಕೆ ಹೋದರು. ಪ್ರಾಪಂಚಿಕ ವಸ್ತುವಿನಲ್ಲಿ ಆಸಕ್ತನಾದವನು, ತೋಟದ ಬಾಗಿಲನ್ನು ಪ್ರವೇಶಿಸಿದ ಕೂಡಲೆ, ಎಷ್ಟು ಮಾವಿನ ಮರಗಳಿವೆ, ಪ್ರತಿಯೊಂದು ಮರದಲ್ಲಿಯೂ ಎಷ್ಟು ಹಣ್ಣುಗಳಿವೆ, ಈ ತೋಟದ ಒಟ್ಟು ಖರೀದಿ ಎಷ್ಟಾಗಬಹುದು ಎಂಬುದನ್ನು ಲೆಕ್ಕಾಚಾರ ಹಾಕುವುದಕ್ಕೆ ಮೊದಲು ಮಾಡಿದನು. ಇವನೊಂದಿಗೆ ಬಂದ ಸ್ನೇಹಿತನು ತೋಟದ ಮಾಲೀಕನ ಹತ್ತಿರ ಹೋಗಿ ಅವನ ಪರಿಚಯ ಮಾಡಿಕೊಂಡು, ಅವನ ಅಪ್ಪಣೆ ಪಡೆದು ಸುಮ್ಮನೆ ಮಾವಿನ ಗಿಡದ ಹತ್ತಿರ ಹೋಗಿ ಹಣ್ಣನ್ನು ಕಿತ್ತು ತಿನ್ನಲು ಮೊದಲು ಮಾಡಿದನು. ಈಗ ಇವರಿಬ್ಬರಲ್ಲಿ ಯಾರು ಬುದ್ಧಿವಂತರು? ಮಾವಿನ ಹಣ್ಣನ್ನು ತಿನ್ನಿ, ಅದು ನಿಮ್ಮ ಹಸಿವನ್ನು ಅಡಗಿಸುವುದು. ಮರದ

ಎಲೆಯನ್ನು ಎಣಿಸಿ ಕೆಲಸಕ್ಕೆ ಬಾರದ ಲೆಕ್ಕಾಚಾರ ಹಾಕುವುದರಿಂದ ಪ್ರಯೋಜನವೇನು ? ಪಾಂಡಿತ್ಯದಿಂದ ಮೆರೆಯುವವನು ದೇವರ ವಿಚಾರ ವಾಗಿ ಕೆಲಸಕ್ಕೆ ಬಾರದ ಹಲವು ಚರ್ಚೆಗಳಲ್ಲಿ ನಿರತನಾಗಿರುವನು. ಆದರೆ ಶ್ರದ್ಧಾ ವಿನಯದಿಂದ ಕೂಡಿದ ಭಕ್ತ ದೇವರ ಅನುಗ್ರಹದಿಂದ ಸಚ್ಚಿದಾನಂದವನ್ನು ಜಗದಲ್ಲಿ ಅನುಭವಿಸುವನು.

೯. ಸಂತೆಯಿಂದ ದೂರ ಇರುವವರೆಗೆ ಒಬ್ಬನಿಗೆ "ಹೊ, ಹೊ!" ಎಂಬ ಅಸ್ಪಷ್ಟ ಧ್ವನಿಯೊಂದೆ ಕೇಳುವುದು. ಆದರೆ ಸಂತೆಯನ್ನು ಒಳಹೊಕ್ಕಾಗ ಶಬ್ಧ ಸ್ಪಷ್ಟವಾಗುವುದು. ಆಗ ಒಬ್ಬನು ಚೌಕಾಶಿ ಮಾಡುತ್ತಿರುವುದು, ಮತ್ತೊಬ್ಬರು ಕೊಳ್ಳುತ್ತಿರುವುದು ಇವನ್ನು ಅವನು ನೋಡುತ್ತಾನೆ. ಇದರಂತೆಯೇ ಧಾರ್ಮಿಕ ಪ್ರಪಂಚದಿಂದ ದೂರ ಇರುವ ವರೆಗೆ ಒಬ್ಬನಿಗೆ ಧರ್ಮದ ಸಾರ ಗೊತ್ತಾಗುವುದಿಲ್ಲ.

೧೦. ವೇದ ಪುರಾಣ ಮತ್ತು ಇನ್ನೂ ಇತರ ಧರ್ಮಗ್ರಂಥಗಳೆಲ್ಲ, ಮಾನವನ ಬಾಯಿಂದ ಬಂದುದರಿಂದ ಎಂಜಲಾಗಿವೆ. ಒಂದು ಮಾತ್ರ ಬಂದಿಲ್ಲ. ಅದೇ ಬ್ರಹ್ಮ ಅಥವಾ ಅದ್ವಿತೀಯ ವಸ್ತು. ಏಕೆಂದರೆ ಅದನ್ನು ಇದುವರೆಗೆ ಯಾರಿಗೂ ಹೇಗಿದೆ ಎಂದು ವರ್ಣಿಸುವುದಕ್ಕೇ ಸಾಧ್ಯವಾಗಿಲ್ಲ.

೧೧. ಪ್ರಾಪಂಚಿಕ ಮನುಷ್ಯನಿಗೆ ಪರಮಾತ್ಮನ ಧ್ಯಾನದಿಂದ ಬರುವ ಅತ್ಯಾನಂದವನ್ನು ವರ್ಣಿಸುವುದು ಏನೂ ಅರಿಯದ ಮಗುವಿಗೆ ದಾಂಪತ್ಯ ಸುಖವನ್ನು ವರ್ಣಿಸುವಷ್ಟೆ ಕಷ್ಟವಾಗಿದೆ.

೧೨. ಸ ರಿ ಗ ಮ ಪ ದ ನಿ, ಎಂದು ಬಾಯಿಯಲ್ಲಿ ಹೇಳುವುದು ಸುಲಭ. ಆದರೆ ಅದನ್ನು ವಾದ್ಯದ ಮೇಲೆ ಬಾರಿಸುವುದು ಕಷ್ಟ. ಇದರಂತೆಯೇ ಧಾರ್ಮಿಕ ವಿಚಾರವಾಗಿ ಮಾತನಾಡುವುದು ಸುಲಭ. ಆದರೆ ಅದನ್ನು ಅಭ್ಯಾಸ ಮಾಡುವುದು ಕಷ್ಟ.

೧೩. ಒಂದು ದಿನ ರಾಮಚಂದ್ರನೆಂಬ ಬ್ರಹ್ಮಚಾರಿ ದಕ್ಷಿಣೇಶ್ವರ ದಲ್ಲಿ ಶ್ರೀ ರಾಮಕೃಷ್ಣರನ್ನು ಕಂಡನು. ಆತನು ಸನ್ಯಾಸಿಗಳಂತೆ ತನ್ನ ಜಟೆಯನ್ನು ಬೆಳೆಸಿದ್ದನು. ಶ್ರೀರಾಮಕೃಷ್ಣರ ಮುಂದೆ ಕುಳಿತಮೇಲೆ 'ಶಿವೋಹಂ' ಎನ್ನುತ್ತಾ ಮತ್ತೇನನ್ನೂ ಮಾತನಾಡುತ್ತಿರಲಿಲ್ಲ.

ಶ್ರೀರಾಮಕೃಷ್ಣರು ಮೌನವಾಗಿ ಕೊಂಚಕಾಲ ಅವನನ್ನು ಪರೀಕ್ಷಿಸಿ, "ಸುಮ್ಮನೆ ಶಿವೋಽಹಂ ಎಂದು ಹೇಳುವುದರಿಂದ ಪ್ರಯೋಜನವೇನು? ಒಬ್ಬನು ತನ್ನ ಅಂತರಂಗದಲ್ಲಿಯೇ ಇರುವ ಪರಮಾತ್ಮನ ಧ್ಯಾನದಲ್ಲಿ ನಿರತನಾಗಿ ತಾನೆಂಬುದನ್ನೆಲ್ಲ ಮರೆತು ಆತನಲ್ಲಿ ಐಕ್ಯನಾದ ಮೇಲೆ ಮಾತ್ರ ಆ ಪವಿತ್ರ ಮಂತ್ರವನ್ನು ಉಚ್ಚರಿಸುವುದಕ್ಕೆ ಯೋಗ್ಯನಾಗುತ್ತಾನೆ. ಸಾಕ್ಷಾತ್ಕಾರವಿಲ್ಲದೆ ಸುಮ್ಮನೆ ಪದವನ್ನು ಉಚ್ಚರಿಸುವುದರಿಂದ ಪ್ರಯೋಜನವೇನು? ಅಂತಹ ಸಾಕ್ಷಾತ್ಕಾರ ಸಿದ್ಧಿಸುವತನಕ, ದೇವರನ್ನು ಸ್ವಾಮಿ ಎಂದು, ನಾವು ಆತನ ದಾಸರೆಂದೂ ತಿಳಿಯುವುದು ಒಳ್ಳೆಯದು" ಎಂದರು. ಬ್ರಹ್ಮಚಾರಿಗೆ ತನ್ನ ತಪ್ಪು ಗೊತ್ತಾಗಿ, ಈ ಬುದ್ಧಿವಾದ ಮತ್ತು ಇನ್ನೂ ಇತರ ಬೋಧನೆಗಳನ್ನು ಕೇಳಿ ಬುದ್ಧಿವಂತನಾದನು. ಅವನು ಕೋಣೆಯನ್ನು ಬಿಡುವುದಕ್ಕೆ ಮುಂಚೆ ಶ್ರೀರಾಮಕೃಷ್ಣರ ಕೋಣೆಯ ಗೋಡೆಯ ಮೇಲೆ ಹೀಗೆ ಬರೆದನು: ಪರಮಹಂಸರಿಂದ ಕಲಿತ ಬುದ್ಧಿವಾದ: "ಇಂದಿನಿಂದ ಬ್ರಹ್ಮಚಾರಿ ರಾಮಚಂದ್ರ ದೇವರನ್ನು ಸ್ವಾಮಿಯೆಂದೂ ತಾನು ಅವನ ಸೇವಕನೆಂದೂ ತಿಳಿಯುತ್ತಾನೆ."

---

# ಗೃಹಸ್ಥರಿಗೆ ತಕ್ಕ ಸಾಧನ

೧. ಕಣ್ಣಾಮುಚ್ಚಾಲೆ ಆಟದಲ್ಲಿ ಆಡುವವನು ಅಜ್ಜಿಯನ್ನು ಮುಟ್ಟಿದ ಮೇಲೆ ಅವನು ಇನ್ನು ಆಟದಲ್ಲಿ ಭಾಗವಹಿಸಲಾರ. ಅವನು ತನ್ನ ಇಚ್ಛೆ ಬಂದ ಕಡೆಗೆ ಹೋಗಬಹುದು. ಯಾರೂ ಅವನನ್ನು ಕಳ್ಳನೆಂದು ತಿಳಿದು ಅಟ್ಟಿಸಿಕೊಂಡು ಬರುವುದಿಲ್ಲ. ಇದರಂತೆಯೇ ಪ್ರಪಂಚದ ಆಟದ ಮೈದಾನದಲ್ಲಿ ಯಾರು ದೇವರ ಪಾದಪದ್ಮಗಳನ್ನು ಮುಟ್ಟುತ್ತಾರೆಯೋ ಅವರು ಬಂಧನದಿಂದ ಮುಕ್ತರಾಗುವರು. ದೇವರಲ್ಲಿ ಯಾರು ಆಶ್ರಯವನ್ನು ಪಡೆಯುತ್ತಾರೆಯೊ ಅವರನ್ನು ಸಂಸಾರದ ಬಂಧನಗಳು ಕಟ್ಟಲಾರವು.

೨. ಹಳ್ಳಿಯ ಕಡೆ ಗದ್ದೆ ಮತ್ತು ನೀರು ಹರಿಯುವ ಕೆಲವೆಡೆ

ಮೀನನ್ನು ಹಿಡಿಯುವುದಕ್ಕೆ ಬಲೆಯನ್ನು ಹಾಕುವರು. ಬೊಂಬಿನ ಕಡ್ಡಿಗಳ ಮಧ್ಯೆ ನೀರು ಹರಿಯುತ್ತ ಹೋಗುವುದನ್ನು ನೋಡಿ ಮೀನು ಅಲ್ಲಿಗೆ ಅತ್ಯಂತ ಸಂತೋಷದಿಂದ ಹೋಗುವುದು. ಆದರೆ ಒಮ್ಮೆ ಪ್ರವೇಶಿಸಿದರೆ ಪುನಃ ಬರಲಾರವು. ಅವುಗಳು ಬಲೆಯಲ್ಲಿ ಬಿದ್ದು ಶೀಘ್ರದಲ್ಲಿ ತಮ್ಮ ಪ್ರಾಣವನ್ನೇ ಕಳೆದುಕೊಳ್ಳುವುವು. ಆದರೆ ಮತ್ತೊಂದರ ಅನುಭವದಿಂದ ಬುದ್ಧಿ ಕಲಿತ ಒಂದೆರಡು ಮೀನುಗಳು ಮಾತ್ರ ಮತ್ತೊಂದು ಕಡೆಗೆ ಧುಮುಕಿ ತಪ್ಪಿಸಿಕೊಳ್ಳುತ್ತವೆ. ಇದರಂತೆಯೆ ಮೂಢರು ಮೋಸದ ಬೆಳಕಿಗೆ ಮರುಳಾಗಿ ಪ್ರಪಂಚವನ್ನು ಪ್ರವೇಶಿಸುವರು. ಆದರೆ ಕೊನೆಗೆ ಪ್ರಪಂಚದ ಮಾಯೆಯಲ್ಲಿ ಸಿಕ್ಕಿಬೀಳುವರು. ಹಲವಾರು ಕಷ್ಟವನ್ನು ಅನುಭವಿಸಿ ಕೊನೆಗೆ ನಾಶವಾಗುವರು. ಯಾರು ಮತ್ತೊಬ್ಬರ ಅನುಭವದಿಂದ ಬುದ್ಧಿ ಕಲಿತು ಕಾಮಕಾಂಚನಗಳಿಗೆ ಬೀಳದೆ ದೇವರಲ್ಲಿ ಶರಣಾಗತರಾಗುತ್ತಾರೆಯೊ ಅವರೇ ನಿಜವಾದ ಆನಂದವನ್ನು ಅನುಭವಿಸುವವರು.

೩. ಭಕ್ತ ರಾಮಪ್ರಸಾದ ಈ ಪ್ರಪಂಚವನ್ನು ಒಂದು ಕನಸೆಂದು ಕರೆದನು. ಆದರೆ ಒಮ್ಮೆ ದೇವರ ಮೇಲೆ ಭಕ್ತಿ ಹುಟ್ಟಿತೆಂದರೆ ಈ ಪ್ರಪಂಚವೆ,

"—ಆನಂದದ ನೆಲೆವೀಡು
ತಿಂದು ಕುಡಿದು ನಲಿನಲಿಯುತ ಕಾಲಕಳೆವೆ.
ಎನಿತಮೋಘ ಜನಕರಾಜನಾ ತಪಃ ಪ್ರಭೆ !
ಆವ ಸುಖಕೆ ಕೊರತೆ ಇತ್ತು ಅವಗೆ ಇಲ್ಲಿ ?"

ಇಲ್ಲ! ಅವನು ಎರಡನ್ನೂ (ದೇವರು ಮತ್ತು ಪ್ರಪಂಚ) ಸಮದೃಷ್ಟಿಯಿಂದ ನೋಡುತ್ತಿದ್ದನು. ಅವನು ತನ್ನ ಮನಸ್ಸನ್ನೇನೊ ದೇವರಿಗೆ ಅರ್ಪಿಸಿದ್ದನು. ಆದರೂ ಏಕಕಾಲದಲ್ಲಿ ಅವನು ಬಟ್ಟಲಿನ ಹಾಲನ್ನು ಕುಡಿದನು.

೪. ಒಂದು ದಿನ ಒಬ್ಬನು, ಗೃಹಸ್ಥರು ದೈವಭಕ್ತರಾಗುವುದಕ್ಕೆ ಸಾಧ್ಯವೆ ಎಂದು ಕೇಳಿದನು. ಶ್ರೀರಾಮಕೃಷ್ಣರು ಮಂದಹಾಸದಿಂದ ಹೀಗೆ ಹೇಳಿದರು—"ನಾನು ಹುಟ್ಟಿದ ಹಳ್ಳಿಯ ಹತ್ತಿರ ಹೆಂಗಸರು

ಅವಲಕ್ಕಿ ಕುಟ್ಟುತ್ತಿರುವುದನ್ನು ನೋಡಿರುವೆ. ಒಂದು ಕೈಯಿಂದ ಒರಳಿನಲ್ಲಿರುವ ಅವಲಕ್ಕಿಯನ್ನು ಆಡಿಸುವಳು. ಮತ್ತೊಂದು ಕೈಯಿಂದ ಮಗುವನ್ನು ಹಿಡಿದುಕೊಂಡು ಅದಕ್ಕೆ ಎದೆ ಹಾಲನ್ನು ಕುಡಿಸುವಳು. ಅದೇ ಕಾಲದಲ್ಲಿ ಬಂದವರ ಹತ್ತಿರ ನಿನ್ನ ಹಿಂದಿನ ಬಾಕಿ ಇಷ್ಟು, ಇವತ್ತಿನ ಬಾಕಿ ಇಷ್ಟು ಎಂದು ವ್ಯಾಪಾರ ಮಾಡುವಳು. ಅವರು ಮಾಡುವ ಕೆಲಸ ಅಷ್ಟೊಂದಿದ್ದರೂ ಕುಟ್ಟುವ ಯಂತ್ರ ತನ್ನ ಕೈಮೇಲೆ ಬಿದ್ದು ಗಾಯಮಾಡದೆ ಇರಲಿ ಎಂದು ಯಾವಾಗಲೂ ತನ್ನ ಮನಸ್ಸನ್ನು ಅದರ ಮೇಲೆ ಇಟ್ಟಿರುವಳು. ಪ್ರಪಂಚದಲ್ಲಿರಿ. ಆದರೆ ಯಾವಾಗಲೂ ಅವನನ್ನು ನೆನೆಯಿರಿ. ಅವನಿಂದ ದೂರವಾದರೆ ನೀವು ಹಾಳಾದಂತೆ."

೫. ಯಾವನು ಪ್ರಪಂಚದ ಪ್ರಲೋಭನಗಳ ಮಧ್ಯದಲ್ಲಿದ್ದು ಭಗವತ್ ಭಕ್ತಿಯಿಂದ ತನ್ನ ಮನಸ್ಸನ್ನು ಏಕಾಗ್ರಗೊಳಿಸಬಲ್ಲನೊ ಅವನೇ ನಿಜವಾದ ವೀರ. ನಿಜವಾದ ಶೂರ ತಲೆಯಮೇಲೆ ಭಾರವನ್ನು ಹೊತ್ತು ಕೊಂಡು ಹೋಗುತ್ತಿರುವಾಗ ಯಾವ ದಿಕ್ಕಿನಲ್ಲಿ ಬೇಕಾದರೆ ಆ ದಿಕ್ಕಿನಲ್ಲಿ ತಿರುಗಿ ನೋಡಬಲ್ಲ. ಇದರಂತೆಯೇ ಇಂದ್ರಿಯವನ್ನು ನಿಗ್ರಹಿಸಿದ ಜ್ಞಾನಿ ಸಂಸಾರ ತಾಪತ್ರಯಗಳ ಭಾರದಿಂದ ಕುಗ್ಗಿ ಹೋಗಿದ್ದರೂ, ಅವನ ಮನಸ್ಸು ಯಾವಾಗಲೂ ದೇವರ ಕಡೆಗೆ ತಿರುಗಿರುವುದು.

೬. ಉತ್ತರ ಇಂಡಿಯಾ ದೇಶದಲ್ಲಿ ತಲೆಯ ಮೇಲೆ ಹೆಂಗಸರು ಒಂದರ ಮೇಲೊಂದು ನಾಲ್ಕೈದು ನೀರಿನ ಕೊಡವನ್ನು ಇಟ್ಟು ಹೊತ್ತುಕೊಂಡು ಹೋಗುತ್ತಿರುವಾಗ ಸ್ನೇಹಿತರೊಂದಿಗೆ ತಮ್ಮ ಸುಖ ದುಃಖದ ಕಥೆಗಳನ್ನು ಮಾತನಾಡಿಕೊಂಡು ಹೋಗುತ್ತಾ, ಕೆಳಗೆ ಕೊಡ ಬೀಳದಿರಲಿ ಎಂದು ಅದರ ಮೇಲೆ ಮನಸ್ಸನ್ನು ಇಡುವಂತೆ, ಧರ್ಮ ಪಂಥದಲ್ಲಿ ನಡೆಯುವ ದಾರಿಗನು ಎಂತಹ ಸನ್ನಿವೇಶದಲ್ಲಿಯೂ ತನ್ನ ನಿಜವಾದ ಗುರಿಯನ್ನು ಬಿಟ್ಟು ಹೋಗದಂತೆ ಜೋಪಾನವಾಗಿರಬೇಕು.

೭. ಬೀದಿಯಲ್ಲಿ ಹಾಡುತ್ತ ಹೋಗುವವನು ಏಕಕಾಲದಲ್ಲಿ ಎರಡು ವಾದ್ಯಗಳನ್ನು ಬಾರಿಸುವಂತೆ ಎಲೈ ಗೃಹಸ್ಥರೆ ನಿಮ್ಮ ಎರಡು ಕೈಗಳಿಂದಲೂ ಪ್ರಪಂಚದ ಕೆಲಸಗಳನ್ನು ಮಾಡಿ. ಆದರೆ ಅನವರತವೂ ಭಗವನ್ನಾಮಸ್ಮರಣೆಯನ್ನು ಮರೆಯಬೇಡಿ.

೮. ಚಾರೆ ಮನೆಯಲ್ಲಿ ಕೆಲಸಮಾಡುತ್ತಿರುವಾಗ ತನ್ನ ಉಪಪತಿ ಯಾವ ಸಮಯಕ್ಕೆ ಬರುತ್ತಾನೆ ಎಂಬುದನ್ನೇ ನೆನೆಯುವಂತೆ ಎಲೈ ಗೃಹಸ್ಥರೆ, ನೀವು ನಿಮ್ಮ ಪ್ರಾಪಂಚಿಕ ಕೆಲಸಗಳನ್ನು ಮಾಡಿ. ಆದರೆ ನಿಮ್ಮ ಮನಸ್ಸನ್ನು ಯಾವಾಗಲೂ ದೇವರ ಮೇಲೆ ಇಡಿ.

೯. ಪ್ರಪಂಚದಲ್ಲಿ ಹೇಗೆ ಅನಾಸಕ್ತನಾಗಿರುವುದು ನಿಮಗೆ ಗೊತ್ತೆ? ಒಬ್ಬನು ಕೆಸರಿನಲ್ಲಿರುವ ಮೀನಿನಂತೆ ಇರಬೇಕು, ಮೀನು ಕೆಸರಿನಲ್ಲಿ ಇರುವುದು. ಆದರೆ ಕೆಸರಿನಿಂದ ಮೀನು ಕೊಳೆಯಾಗುವುದಿಲ್ಲ.

೧೦. ತಕಡಿಯಲ್ಲಿ ತೂಕವಾಗಿರುವುದು ಕೆಳಗೆ ಇರುವುದು. ತೂಕವಿಲ್ಲದೆ ಇರುವುದು ಮೇಲೆ ಹೋಗುವುದು. ಮಾನವನ ಮನಸ್ಸು ತಕ್ಕಡಿಯಂತೆ, ಎರಡು ತೂಕಗಳ ಪ್ರಭಾವಕ್ಕೆ ಒಳಪಟ್ಟಿರುವುದು. ಒಂದನೆಯದು ಪ್ರಪಂಚ ಮತ್ತು ಅದರ ಕೀರ್ತಿ ಮುಂತಾದುವನ್ನು ಅನುಭವಿಸಬೇಕೆಂಬ ಆಸೆ. ಎರಡನೆಯದು ವಿವೇಕ, ವೈರಾಗ್ಯ ಮತ್ತು ಭಗವದ್ಭಕ್ತಿ. ಮೊದಲನೆಯದು ಹೆಚ್ಚಾಗಿದ್ದರೆ ಮನಸ್ಸು ಪ್ರಪಂಚದ ಕಡೆಗೆ ವಾಲಿ ದೇವರಿಂದ ದೂರ ಹೋಗುವುದು. ಎರಡನೆಯದು ಹೆಚ್ಚಾಗಿದ್ದರೆ ಮನಸ್ಸು ದೇವರ ಕಡೆಗೆ ವಾಲಿ ಪ್ರಪಂಚದಿಂದ ದೂರವಾಗುವುದು.

೧೧. ಒಬ್ಬ ರೈತ ಕಬ್ಬಿನ ಗದ್ದೆಗೆ ದಿನವೆಲ್ಲ ನೀರನ್ನು ಹಾಯಿಸುತ್ತಿದ್ದನು. ತನ್ನ ಕೆಲಸವೆಲ್ಲ ಪೂರೈಸಿದ ಮೇಲೆ ಗದ್ದೆಯಲ್ಲಿ ಒಂದು ತೊಟ್ಟು ನೀರು ಕೂಡ ಇಲ್ಲದೆ ಇರುವುದನ್ನು ಕಂಡನು. ದೂರದಲ್ಲಿದ್ದ ಹೆಗ್ಗಣದ ಬಿಲದ ಮೂಲಕವಾಗಿ ನೀರೆಲ್ಲ ಹರಿದು ಹೋಗಿತ್ತು. ದೇವರ ಆರಾಧನೆಯೊಂದಿಗೆ ಧನ, ಕೀರ್ತಿ ಮುಂತಾದ ಬಯಕೆಗಳನ್ನು ಆಶಿಸುವ ಭಕ್ತನ ಸ್ಥಿತಿಯೂ ಅಷ್ಟೆ. ಅವನು ಪ್ರತಿ ದಿನ ಪ್ರಾರ್ಥಿಸಿದರೂ ಕೊನೆಗೆ ಸ್ವಲ್ಪವೂ ಮುಂದುವರಿದಿರುವುದಿಲ್ಲ. ಅವನ ಭಕ್ತಿಯೆಲ್ಲ ಆಸೆ ಎಂಬ ಬಿಲದ ಮೂಲಕವಾಗಿ ಹರಿದು ವ್ಯರ್ಥವಾಗಿರುವುದು ಗೊತ್ತಾಗುವುದು.

೧೨. ಕಂಬವನ್ನು ಹಿಡಿದುಕೊಂಡು ಸುತ್ತಲೂ ಹುಡುಗನು ವೇಗವಾಗಿ ಸುತ್ತುತ್ತಾನೆ. ಸುತ್ತುವಾಗ ಅವನ ಗುರಿಯೆಲ್ಲ ಕಂಬದ ಮೇಲೆ ಇದೆ. ಕಂಬವನ್ನು ಅವನು ಎಲ್ಲಿಯವರೆಗೆ ಭದ್ರವಾಗಿ ಹಿಡಿದುಕೊಂಡಿರುವನೊ ಅಲ್ಲಿಯವರೆಗೂ ಅವನು ಬೀಳುವುದಿಲ್ಲವೆಂದೂ, ಅವನು

ಕಂಬವನ್ನು ಬಿಟ್ಟ ತಕ್ಷಣವೇ ತಾನು ಬಿದ್ದುಬಿಡುವನೆಂದೂ ಅವನಿಗೆ ಚೆನ್ನಾಗಿ ಗೊತ್ತಿದೆ. ಅದರಂತೆಯೇ ಮನಸ್ಸನ್ನು ದೇವರ ಮೇಲೆ ಯಾವಾಗಲೂ ನಿಲ್ಲಿಸಿ, ನಿಮ್ಮ ಪ್ರಪಂಚದ ಕೆಲಸಗಳನ್ನು ಮಾಡಿದರೆ ಎಲ್ಲಾ ಅಪಾಯಗಳಿಂದಲೂ ಪಾರಾಗುವಿರಿ.

೧೩. ಅನೇಕರು ಪ್ರಪಂಚದಲ್ಲಿ ತಮ್ಮ ಸುಖ ಹೆಚ್ಚುವುದೆಂದು ತಿಳಿದು ವ್ರತಾದಿಗಳನ್ನು ಮಾಡುತ್ತಾರೆ. ಆದರೆ ದುರದೃಷ್ಟವಶದಿಂದ ಅವರು ಏನಾದರೂ ಕಷ್ಟಕ್ಕೆ ಒಳಗಾದಾಗ, ಅಥವಾ ಸಾಯುವ ಕಾಲದಲ್ಲಿ ದೇವರನ್ನು ಮರೆಯುವರು. ಸಾಧಾರಣ ದಿನಗಳಲ್ಲಿ ಅರಗಿಣಿ ರಾಧಾ ರಮಣನ ಹೆಸರನ್ನು ದಿನವೆಲ್ಲ ಹಾಡುವುದು. ಆದರೆ ಅದು ಬೆಕ್ಕಿನ ಕೈಗೆ ಸಿಕ್ಕಿಕೊಂಡಾಗ ರಾಧಾರಮಣನ ಹೆಸರನ್ನು ಮರೆತು ತನ್ನ ನೈಜಧ್ವನಿ ಯಿಂದ ಕೀರ್, ಕೀರ್ ಎಂದು ಕಿರಿಚಿಕೊಳ್ಳುವುದು.

೧೪. ದೋಣಿ ನೀರಿನಲ್ಲಿ ಇದ್ದರೆ ಅಪಾಯವಿಲ್ಲ. ಆದರೆ ನೀರು ದೋಣಿಯೊಳಗೆ ಬರದಂತೆ ಮಾಡಬೇಕು. ನೀರು ಬಂದರೆ ದೋಣಿ ಮುಳುಗುವುದು. ಇದರಂತೆಯೆ ಭಕ್ತನು ಗೃಹಸ್ಥನಂತೆ ಪ್ರಪಂಚದಲ್ಲಿ ಇದ್ದರೆ ತೊಂದರೆ ಇಲ್ಲ. ಆದರೆ ಪ್ರಾಪಂಚಿಕತೆ ಅವನ ಮನಸ್ಸನ್ನು ಪ್ರವೇಶಿಸಕೂಡದು.

೧೫. ಪ್ರಪಂಚ ಹೇಗಿದೆ ಬಲ್ಲಿರಾ ? ಇದು ಬರೀ ಬೀಜ ಮತ್ತು ಸಿಪ್ಪೆಯಿಂದ ಕೂಡಿದ ಒಂದು ಬಗೆಯ ಹಣ್ಣಿನಂತೆ ಇದೆ. ತಿರುಳು ಇರುವುದು ಎಲ್ಲೋ ಸ್ವಲ್ಪ. ಇದನ್ನು ತಿಂದರೆ ಹೊಟ್ಟೆ ನೋವು ಬರುವುದು.

೧೬. ಕೈಗೆ ಎಣ್ಣೆ ಸವರಿಕೊಂಡು ಹಲಸಿನ ಹಣ್ಣನ್ನು ಬಿಚ್ಚಿದರೆ ಕೈಗೆ ಅಂಟುವುದಿಲ್ಲ. ಅದರಂತೆಯೆ ನೀವು ಮೊದಲು ಭಕ್ತಿ ಎಂಬ ಎಣ್ಣೆ ಯನ್ನು ಸವರಿಕೊಂಡರೆ ಪ್ರಪಂಚದಲ್ಲಿ ಕಾಮಕಾಂಚನ ಪಾಶಕ್ಕೆ ಬೀಳದೆ ಇರಬಹುದು.

೧೭. ಹಾವು ತನ್ನನ್ನು ಹಿಡಿಯಲು ಬರುವವರನ್ನು ಕಚ್ಚುತ್ತದೆ. ಆದರೆ ಯಾರಿಗೆ ಗಾರುಡಿಗ ವಿದ್ಯೆ ಗೊತ್ತಿದೆಯೊ ಅವರು ನಿರ್ಭಯವಾಗಿ ಏಳೆಂಟು ಹಾವನ್ನು ತಮ್ಮ ಕೊರಳಿನ ಸುತ್ತಲೂ ನೇತುಹಾಕಿಕೊಂಡು ಅವುಗಳಿಂದ ಬೇಕಾದಷ್ಟು ಆಟವಾಡಿಸುವರು. ಇದರಂತೆಯೇ ಯಾರು

ವಿವೇಕ ಮತ್ತು ವೈರಾಗ್ಯವನ್ನು ಹೊಂದಿದ ಮೇಲೆ ಪ್ರಪಂಚದಲ್ಲಿ ಜೀವಿಸುತ್ತಾರೆಯೊ ಅವರು ಪ್ರಪಂಚದ ವಿಷಯಗಳಿಂದ ಕೆಡುವುದಿಲ್ಲ. ವಿವೇಕ ಮತ್ತು ವೈರಾಗ್ಯ ಎಂಬಿವು ಹಾವಾಡಿಸುವವನನ್ನು ಕಾಪಾಡುವ ಮಂತ್ರದ ಮಣ್ಣಿನಂತೆ.

೧೮. ಮೂಲಂಗಿಯನ್ನು ತಿಂದರೆ ಅದು ತೇಗಿನಿಂದ ಗೊತ್ತಾಗುವಂತೆ ಒಬ್ಬನ ಆಲೋಚನೆ ಅವನ ಮಾತಿನಿಂದ ಗೊತ್ತಾಗುವುದು. ಪ್ರಪಂಚದಲ್ಲಿ ಮಗ್ನರಾದವರು ಮಹಾಪುರುಷರನ್ನು ನೋಡುವುದಕ್ಕೆ ಬಂದರೂ ಅಲ್ಲಿಯೂ ಪ್ರಾಪಂಚಿಕ ವಿಷಯವನ್ನೇ ಮಾತನಾಡುವರು.

೧೯. ಮನಸ್ಸೇ ಎಲ್ಲಕ್ಕೂ ಮೂಲ ಎಂಬುದನ್ನು ತಿಳಿದುಕೊಳ್ಳಿ. ಒಬ್ಬನನ್ನು ಬುದ್ಧಿವಂತನನ್ನಾಗಿ ಅಥವಾ ದಡ್ಡನನ್ನಾಗಿ ಮಾಡುವುದು, ಬಂಧನದಲ್ಲಿ ನರಳುವಂತೆ ಮಾಡುವುದು ಅಥವಾ ದುರಾತ್ಮನನ್ನಾಗಿ ಮಾಡುವುದು, ಎಲ್ಲಾ ಮನಸ್ಸು. ಯಾರ ಮನಸ್ಸು ಸದಾ ಭಗವಂತನ ಮೇಲೆ ನೆಲೆಸಿರುವುದೊ ಅವನಿಗೆ ಇನ್ನು ಯಾವ ಸಾಧನೆಯೂ ಬೇಕಿಲ್ಲ.

೨೦. ಬ್ರಹ್ಮಜ್ಞಾನವನ್ನು ಪಡೆದವನ ಸ್ವಭಾವ ನಿನಗೆ ಗೊತ್ತೆ? ಅವನು ಸರ್ವಾಂತರ್ಯಾಮಿಯನ್ನು ಒಳಗೆ ಮತ್ತು ಹೊರಗೆ ನೋಡುತ್ತಾನೆ. ಗಾಜಿನ ಬಾಗಿಲಿರುವ ಒಂದು ಕೋಣೆಯೊಳಗೆ ಇದ್ದಂತೆ ಇರುವನು.

೨೧. ಭಗವದ್ಗೀತೆಯನ್ನು ಪೂರ್ತಿ ಹನ್ನೆರಡು ಸಲ ಓದಿದುದರ ಪ್ರತಿಫಲ ಗೀತೆಯನ್ನು ಹನ್ನೆರಡು ಸಲ ಉಚ್ಚರಿಸಿದಷ್ಟೆ. ಗೀತೆಯನ್ನು ಹನ್ನೆರಡು ಸಲ ಹೇಳಿರಿ, ಅದು ತ್ಯಾಗಿ ತ್ಯಾಗಿ ಎಂದು ಆಗುತ್ತದೆ. ಗೀತೆ ಒಂದು ಮಾತಿನಲ್ಲಿ ತ್ಯಾಗವನ್ನು ಬೋಧಿಸುತ್ತದೆ. ಎಲ್ಲವನ್ನೂ ತ್ಯಜಿಸಿ ದೇವರಲ್ಲಿ ಶರಣಾಗತರಾಗಿ.

---

*

# ಸಾಧನಕ್ಕೆ ಅಧಿಕಾರಿ

೧. ಒಂದು ಪೂರ್ತಿಮಾಗಿದ ಹಣ್ಣನ್ನು ಅಥವಾ ಸೀಬೆ ಹಣ್ಣನ್ನು ದೇವರಿಗೆ ಕೊಡಬಹುದು, ಅಥವಾ ಇನ್ನು ಯಾವುದಾದರೂ ಕೆಲಸಕ್ಕೆ ಉಪಯೋಗಿಸಬಹುದು. ಆದರೆ ಅದನ್ನು ಒಂದು ಸಲ ಕಾಗೆ ಕುಕ್ಕಿತು ಎಂದರೆ ನೈವೇದ್ಯ ಮಾಡುವುದಕ್ಕೆ ಆಗುವುದಿಲ್ಲ, ದಾನಮಾಡುವುದಕ್ಕೆ ಆಗುವುದಿಲ್ಲ, ಅಥವಾ ತಾನೆ ತಿನ್ನುವುದಕ್ಕೂ ಆಗುವುದಿಲ್ಲ. ಇದರಂತೆಯೇ ಹುಡುಗರಿಗೆ ಮತ್ತು ಯುವಕರಿಗೆ ದೇವರನ್ನು ಹುಡುಕುವಂತೆ ಪ್ರೋತ್ಸಾಹ ಕೊಡಬೇಕು. ಪ್ರಾಪಂಚಿಕ ಆಸೆಗಳಿಂದ ಇನ್ನೂ ಮಾಸದ, ಎಂಜಲಾಗದ ಹಣ್ಣಿನಂತೆ ಅವರು. ಒಂದು ಸಲ ಪ್ರಪಂಚದ ಆಸೆ ಮನಸ್ಸನ್ನು ಪ್ರವೇಶ ಮಾಡಿತು ಎಂದರೆ ಮೋಕ್ಷ ಮಾರ್ಗವನ್ನು ಅವರು ಅನುಸರಿಸುವಂತೆ ಮಾಡುವುದು ತುಂಬಾ ಕಷ್ಟ.

೨. ನಾನು ಏಕೆ ಹುಡುಗರನ್ನು ಅಷ್ಟು ಪ್ರೀತಿಸುತ್ತೇನೆ? ಅವರು ತಮ್ಮ ಮನಸ್ಸಿನ ಹದಿನಾರು ಆಣೆಗೆ ಒಡೆಯರು ಅವರು ಬೆಳೆದಂತೆಲ್ಲ ಅದು ಭಾಗವಾಗುತ್ತ ಬರುವುದು. ಮದುವೆಯಾದವನ ಅರ್ಧಮನಸ್ಸು ಅವನ ಹೆಂಡತಿಯ ಕಡೆ ಹೋಗುವುದು. ಮಗು ಹುಟ್ಟಿದ ಮೇಲೆ ಅದು ಕಾಲುಭಾಗ ತೆಗೆದುಕೊಳ್ಳುತ್ತದೆ. ಉಳಿದ ಕಾಲುಪಾಲು ಮನಸ್ಸು ತಂದೆತಾಯಿಗಳು, ಕೀರ್ತಿಗೌರವ, ಉಡುಪು ಮುಂತಾದುವುಗಳ ಕಡೆ ಚದರುತ್ತದೆ. ಆದಕಾರಣವೆ ಹುಡುಗರ ಮನಸ್ಸು ದೇವರನ್ನು ಸುಲಭ ವಾಗಿ ತಿಳಿಯಬಲ್ಲುದು. ಹೀಗೆ ಮಾಡುವುದಕ್ಕೆ ವೃದ್ಧರಿಗೆ ಬಹಳ ಕಷ್ಟ.

೩. ಗಿಳಿ ಬೆಳೆದು ಅದರ ಗಂಟಲಿನ ಪರೆ ಗಟ್ಟಿಯಾದ ಮೇಲೆ ಅದಕ್ಕೆ ಹಾಡಲು ಕಲಿಸಲಾಗುವುದಿಲ್ಲ. ಎಳೆಯದಾಗಿರುವಾಗಲೇ ಅದಕ್ಕೆ ಕಲಿಸಬೇಕು. ಇದರಂತೆಯೇ ವೃದ್ಧಾಪ್ಯದಲ್ಲಿ ದೇವರ ಮೇಲೆ ಮನಸ್ಸನ್ನು ಇಡಬೇಕಾದರೆ ಬಹಳ ಕಷ್ಟ. ಬಾಲ್ಯದಲ್ಲಿ ಇದನ್ನು ಸುಲಭವಾಗಿ ಮಾಡಬಹುದು.

೪. ಒಂದು ಸೇರು ಹಾಲಿನಲ್ಲಿ ಒಂದು ಚಟಾಕು ನೀರು ಇದ್ದರೆ ಅದನ್ನು ಅತ್ಯಲ್ಪ ಶ್ರಮದಿಂದ ಸ್ವಲ್ಪ ಸೌದೆ ಖರ್ಚು ಮಾಡಿ ಇಂಗಿಸ

ಬಹುದು. ಆದರೆ ಒಂದು ಸೇರು ಹಾಲಿನಲ್ಲಿ ಮುಕ್ಕಾಲು ಸೇರು ನೀರು ಇದ್ದರೆ ಅದು ಸುಲಭವಾಗಿ ಇಂಗುವುದಿಲ್ಲ. ಹುಡುಗರ ಮನಸ್ಸು ಪ್ರಾಪಂಚಿಕ ವಸ್ತುಗಳೊಂದಿಗೆ ಇನ್ನೂ ಮಿಶ್ರವಾಗದೆ ಇರುವುದರಿಂದ ದೇವರ ಕಡೆಗೆ ಸುಲಭವಾಗಿ ತಿರುಗಿಸಬಹುದು ಆದರೆ ಆಸೆಯೊಂದಿಗೆ ಹೆಚ್ಚು ಬೆರತುಹೋದ ಮುದುಕರ ಮನಸ್ಸನ್ನು ಹೀಗೆ ಮಾಡಲಾಗುವುದಿಲ್ಲ.

೫. ಎಳೆಯ ಬಿದಿರನ್ನು ಸುಲಭವಾಗಿ ಬಗ್ಗಿಸಬಹುದು. ಆದರೆ ಬಲಿತ ಬಿದಿರನ್ನು ಬಗ್ಗಿಸಲು ಪ್ರಯತ್ನಿಸಿದರೆ ಅದು ಮುರಿದು ಹೋಗುವುದು. ದೇವರ ಕಡೆಗೆ ಎಳೆಯರ ಮನಸ್ಸನ್ನು ತಿರುಗಿಸುವುದು ಸುಲಭ. ಆದರೆ ವಯಸ್ಸಾದವರ ಮನಸ್ಸಾದರೋ ಹಾಗೆ ಯತ್ನಿಸಿದಾಗ ಅದು ತಪ್ಪಿಸಿಕೊಳ್ಳುವುದು.

೬. ಮನುಷ್ಯನ ಮನಸ್ಸು ಸಾಸಿವೆ ಕಾಳಿನ ಪೊಟ್ಟಣದಂತೆ ಇರುವುದು. ಹರಿದ ಪೊಟ್ಟಣದಿಂದ ಚಲ್ಲಾಪಿಲ್ಲಿಯಾಗಿ ಬಿದ್ದುಹೋದ ಸಾಸಿವೆ ಕಾಳನ್ನು ಆರಿಸುವುದು ಎಷ್ಟು ಕಷ್ಟವೋ ಅದರಂತೆಯೇ ಮನುಷ್ಯನ ಮನಸ್ಸು ಹರಿದುಹೋಗಿ ಅನೇಕ ಪ್ರಾಪಂಚಿಕ ವಸ್ತುಗಳಲ್ಲಿ ಲೀನವಾಗಿರುವಾಗ ಅದನ್ನು ಒಂದುಗೂಡಿಸಿ ದೇವರ ಕಡೆಗೆ ತಿರುಗಿಸುವುದು ಸುಲಭ ಸಾಧ್ಯವಲ್ಲ. ಸಿಕ್ಕಿದ ಕಡೆಗೆ ಇನ್ನೂ ಹೋಗದ ಹುಡುಗನ ಮನಸ್ಸನ್ನು ಯಾವುದಾದರೂ ಒಂದು ವಸ್ತುವಿನ ಮೇಲೆ ನಿಲ್ಲಿಸುವುದು ಸುಲಭ. ಆದರೆ ವೃದ್ಧನ ಮನಸ್ಸಾದರೋ ಪ್ರಾಪಂಚಿಕ ವಿಷಯಗಳಲ್ಲಿ ಪೂರ್ಣವಾಗಿ ಬೆರೆತುಹೋಗಿರುವುದರಿಂದ ಅವುಗಳಿಂದ ಸೆಳೆದು ದೇವರಮೇಲೆ ನಿಲ್ಲಿಸುವುದು ಕಷ್ಟ.

೭. ಬೆಣ್ಣೆಯನ್ನು ತೆಗೆಯಬೇಕಾದರೆ ಸೂರ್ಯೋದಯಕ್ಕೆ ಮುಂಚೆಯೇ ಮೊಸರನ್ನು ಕಡೆಯಬೇಕು. ಬಿಸಿಲು ಏರಿದಮೇಲೆ ಕಡೆದರೆ ಒಳ್ಳೆಯ ಬೆಣ್ಣೆ ಸಿಕ್ಕುವುದಿಲ್ಲ. ಇದರಂತೆಯೇ ತಮ್ಮ ಪ್ರಾಯದಲ್ಲಿಯೇ ಯಾರು ಮನಸ್ಸನ್ನು ದೇವರ ಕಡೆಗೆ ತಿರುಗಿಸಿ ಸಾಧನೆಯನ್ನು ಮಾಡುತ್ತಾರೆಯೋ ಅವರೇ ದೇವರನ್ನು ತಿಳಿದುಕೊಳ್ಳುವರು.

೮. ಒದ್ದೆಯಾದ ಬೆಂಕಿಯ ಕಡ್ಡಿಯನ್ನು ಎಷ್ಟು ಸಲ ಗೀಚಿದರೂ ಹತ್ತುವುದಿಲ್ಲ. ಸುಮ್ಮನೆ ಮುರಿದುಹೋಗುವುದು. ಆದರೆ ಒಣಗಿದ

ಬೆಂಕಿಯ ಕಡ್ಡಿಯನ್ನು ಒಂದು ಸಲ ಗೀಚಿದರೆ ಸಾಕು ಹತ್ತುವುದು. ಹಾಗೆಯೇ ಕಪಟವಿಲ್ಲದ ಸತ್ಯವಂತರಾದ ಶುದ್ಧಾತ್ಮರು ಪ್ರಾಪಂಚಿಕ ಆಸೆಗೆ ಒಳಗಾಗದ ಒಣಗಿದ ಬೆಂಕಿಯ ಕಡ್ಡಿಯಂತೆ. ಒಂದು ಸಲ ದೇವರ ಹೆಸರನ್ನು ಹೇಳಿದರೆ ಸಾಕು ಅವರ ಹೃದಯದಲ್ಲಿ ಪರಮಾತ್ಮನ ಪ್ರೇಮ ಉದಯಿಸುವುದು. ಕಾಮಕಾಂಚನ ಪಾಶದಲ್ಲಿ ಸಿಕ್ಕಿರುವ ಪ್ರಾಪಂಚಿಕನ ಮನಸ್ಸಾದರೋ ಒದ್ದೆಯಾದ ಬೆಂಕಿಕಡ್ಡಿಯಂತೆ. ನೂರುವೇಳೆ ಅವರಿಗೆ ದೇವರ ವಿಷಯವನ್ನು ಕುರಿತು ಬೋಧೆಮಾಡಿದರೂ ಭಕ್ತಿಯನ್ನು ಹುಟ್ಟಿಸಲು ಆಗುವುದಿಲ್ಲ.

---

# ಹಲವು ಬಗೆಯ ಸಾಧಕರು

೧. ಎರಡು ವಿಧದ ಸಾಧಕರನ್ನು ನಾವು ನೋಡುತ್ತೇವೆ. ಒಬ್ಬರು ಕೋತಿ ಮರಿಯಂತೆ, ಮತ್ತೊಬ್ಬರು ಬೆಕ್ಕಿನ ಮರಿಯಂತೆ. ಕೋತಿಯ ಮರಿ ತಾನು ತಾಯಿಯನ್ನು ಅಪ್ಪಿ ಹಿಡಿದುಕೊಳ್ಳುತ್ತದೆ. ಅನಂತರ ತಾಯಿ ಅದನ್ನು ಸ್ಥಳದಿಂದ ಸ್ಥಳಕ್ಕೆ ಕರೆದೊಯ್ಯುತ್ತದೆ. ಬೆಕ್ಕಿನ ಮರಿ ತಾಯಿಯನ್ನು ಹಿಡಿದುಕೊಳ್ಳುವುದಿಲ್ಲ. ಆದರೆ ತಾಯಿ ಅದನ್ನು ಎಲ್ಲಿ ಇಟ್ಟರೆ ಅಲ್ಲಿ ಸುಮ್ಮನೆ ಕಿರಚುತ್ತದೆ ಆಗ ತಾಯಿ ಬಂದು ಅದರ ಕತ್ತನ್ನು ಹಿಡಿದುಕೊಂಡು ತನಗೆ ತೋರಿದ ಕಡೆ ಅದನ್ನು ಹೊತ್ತುಕೊಂಡು ಹೋಗುತ್ತದೆ. ಇದರಂತೆಯೇ ಜ್ಞಾನಯೋಗ ಮತ್ತು ಅನಾಸಕ್ತಿ ಯೋಗವನ್ನು ಅಭ್ಯಾಸಮಾಡುವವನು ಮೋಕ್ಷಕ್ಕೆ ತನ್ನ ಸ್ವಪ್ರಯತ್ನದ ಮೇಲೆ ನಿಲ್ಲುವನು. ಆದರೆ ಯಾರು ಪ್ರೇಮಮಾರ್ಗವನ್ನು ಅನುಸರಿಸುತ್ತಾರೆಯೋ ಅವರಿಗೆ ದೇವರೇ ಎಲ್ಲವನ್ನೂ ಮಾಡುತ್ತಾನೆಂಬುದು ಗೊತ್ತಿದೆ. ಆದ ಕಾರಣವೇ ಅವನು ದೇವರನ್ನು ಸಂಪೂರ್ಣ ನೆಚ್ಚಿ ಅವನಲ್ಲಿ ಶರಣಾಗುವನು. ಮೊದಲನೆಯವನು ಕೋತಿಯ ಮರಿಯಂತೆ, ಎರಡನೆಯವನು ಬೆಕ್ಕಿನ ಮರಿಯಂತೆ.

೨. ಮನೆಯ ಯಜಮಾನನು ತನ್ನ ಸಂಸಾರಕ್ಕೆ ಸೇರಿದ ಹಲವು

ಜನರಿಗೆ ಹಲವು ವಿಧದಲ್ಲಿ, ಅಂದರೆ, ಒಬ್ಬನಿಗೆ ತಂದೆ, ಒಬ್ಬನಿಗೆ ಭಾವ, ಒಬ್ಬನಿಗೆ ಮಾವನಂತೆ ಕಾಣುತ್ತಾನೆ. ಅಂತೆಯೇ ಒಂದೇ ದೇವರನ್ನು ಹಲವು ಬಗೆಯಲ್ಲಿ ನೋಡುತ್ತಾರೆ ಮತ್ತು ಹಲವು ಬಗೆಯಲ್ಲಿ ಪೂಜಿಸುತ್ತಾರೆ. ಕೆಲವರು ಆತನೊಂದಿಗೆ ಸ್ನೇಹಿತನಂತೆ ವರ್ತಿಸುತ್ತಾರೆ, ಕೆಲವರು ಅವನನ್ನು ಯಜಮಾನನೆಂದು ನೋಡುತ್ತಾರೆ, ಕೆಲವರು ಅವನನ್ನು ತಮ್ಮ ಮಗುವೆಂದು ತಿಳಿಯುತ್ತಾರೆ, ಮತ್ತೆ ಕೆಲವರು ಅವನನ್ನು ತಮ ಪತಿಯೆಂದು ತಿಳಿಯುತ್ತಾರೆ.

೩. ನೀವು ಹುಡುಕುವುದು ನಿಮಗೆ ದೊರಕುತ್ತದೆ. ಯಾರು ದೇವರನ್ನು ಹುಡುಕುತ್ತಾರೆಯೋ ಅವರಿಗೆ ದೇವರು ದೊರಕುತ್ತಾನೆ. ಯಾರು ದ್ರವ್ಯ ಅಥವಾ ಕೀರ್ತಿಯನ್ನು ಹುಡುಕುತ್ತಾರೆಯೋ ಅವರು ಅದನ್ನು ಪಡೆಯುತ್ತಾರೆ.

೪. ಭಿಕ್ಷುಕ ರಾಜನ ಆಸ್ಥಾನಕ್ಕೆ ಹೋಗಿ ಒಂದು ಕುಂಬಳ ಕಾಯನ್ನೋ ಸೋರೆಕಾಯನ್ನೋ ಕೇಳಿದರೆ ಮೂರ್ಖನಾಗುತ್ತಾನೆ. ಇದರಂತೆಯೇ ಭಕ್ತ, ರಾಜರ ರಾಜನಾದ ದೇವರ ಹತ್ತಿರ ಹೋಗಿ ನಿಜವಾದ ಜ್ಞಾನ ಮತ್ತು ಭಕ್ತಿಯನ್ನು ಕೇಳುವ ಬದಲು ಅಣಿಮಾದಿ ಅಷ್ಟಸಿದ್ಧಿಗಳನ್ನು ಕೇಳಿದರೆ ಮೂರ್ಖನಾಗುತ್ತಾನೆ.

೫. ಸಾಧಕ ಭಕ್ತಿಮಾರ್ಗವನ್ನು ಅನುಸರಿಸುತ್ತಾನೆಯೇ ಅಥವಾ ಜ್ಞಾನಮಾರ್ಗವನ್ನು ಅನುಸರಿಸುತ್ತಾನೆಯೇ ಎಂಬುದನ್ನು ತಿಳಿದುಕೊಳ್ಳುವುದು ಕಷ್ಟ. ಆನೆಗೆ ಎರಡು ಜೊತೆ ಹಲ್ಲುಗಳಿವೆ. ಒಂದು ಹೊರಗಡೆ ಅಲಂಕಾರಕ್ಕೆ ಕಾಣುವ ಕೊಂಬು, ಮತ್ತೊಂದು ಆಹಾರವನ್ನು ಅಗಿಯುವುದಕ್ಕಾಗಿ ಬಾಯೊಳಗಿರುವ ಹಲ್ಲು. ಇದರಂತೆಯೇ ಭಕ್ತನು ಹಲವು ವೇಳೆ ತನ್ನ ನೈಜಸ್ವಭಾವವನ್ನು ಮರೆಮಾಚಿಕೊಂಡು ಬೇರೊಂದು ಸ್ವಭಾವದವನಂತೆ ನಟಿಸುವನು.

೬. ಎರಡು ಬಗೆಯ ಯೋಗಿಗಳಿರುವರು, ಗುಪ್ತ ಮತ್ತು ಪ್ರದರ್ಶಕ. ಮೊದಲನೆಯವನು ರಹಸ್ಯವಾಗಿ ಸಾಧನೆಮಾಡಿ ಯಾರಿಗೂ ಅದು ಕಾಣದಂತೆ ನೋಡಿಕೊಳ್ಳುವನು. ಎರಡನೆಯವನು ಯೋಗಿಯ ಬಾಹ್ಯಚಿಹ್ನೆಗಳಾದ ದಂಡ ಮುಂತಾದುವುಗಳನ್ನು ಹೊತ್ತುಕೊಂಡು ಸರಾಗವಾಗಿ ಆಧ್ಯಾತ್ಮಿಕ ವಿಚಾರಗಳನ್ನು ಮಾತನಾಡುವನು.

# ದೃಢಭಕ್ತ

೧. ಸಾವಿರಾರು ವರ್ಷಗಳು ಕಲ್ಲು, ನೀರಿನಲ್ಲಿರಬಹುದು. ಆದರೂ ನೀರು ಕಲ್ಲಿನೊಳಗೆ ಇಳಿಯುವುದಿಲ್ಲ. ಆದರೆ ಜೇಡಿಮಣ್ಣಿಗೆ ನೀರಿನ ಸಂಪರ್ಕವಾದೊಡನೆಯೇ ಅದು ನೀರಿನಲ್ಲಿ ಕರಗಿಹೋಗುವುದು. ಹಾಗೆಯೇ ಶ್ರದ್ಧಾವಂತರು ಸಾವಿರಾರು ಕಷ್ಟನಷ್ಟಗಳಲ್ಲಿ ಸಿಕ್ಕಿದರೂ ಎದೆಗೆಡುವುದಿಲ್ಲ. ಆದರೆ ಶ್ರದ್ಧೆಯಿಲ್ಲದವರಿಗೆ ಸ್ವಲ್ಪ ಕಷ್ಟ ತೋರಿದರೆ ಸಾಕು, ಆಗಲೇ ನಡುಗುತ್ತಾರೆ.

೨. ದೇವರು ಪ್ರಹ್ಲಾದನ ಪ್ರಾರ್ಥನೆಗೆ ಸಂತುಷ್ಟನಾಗಿ "ಏನು ವರ ಬೇಕು ಕೇಳು" ಎಂದನು ಅದಕ್ಕೆ ಪ್ರಹ್ಲಾದ "ದೇವರೆ, ಯಾರು ನನಗೆ ತೊಂದರೆ ಕೊಟ್ಟರೂ ಅವರನ್ನು ಕ್ಷಮಿಸು. ಅವರನ್ನು ಶಿಕ್ಷಿಸುವುದ ರಿಂದ ನೀನೆ ಶಿಕ್ಷಿಸಿಕೊಳ್ಳುವೆ ಏಕೆಂದರೆ ಚರಾಚರ ವಸ್ತುಗಳಲ್ಲೆಲ್ಲಾ ನೀನು ಇರುವೆ" ಎಂದನು.

೩. ಶ್ರೀರಾಮಕೃಷ್ಣರಿಗೆ ಸಾಧು ಕೇಶವಚಂದ್ರನನ್ನು ನೋಡಲು ತುಂಬಾ ಆಸೆಯಾಯಿತು. ಆಗ ಕೇಶವಚಂದ್ರನು ಕಲ್ಕತ್ತಾನಗರದಲ್ಲಿ ಬೆಲ್ಘಾರಿಯಾದಲ್ಲಿ ಗತಿಸಿದ ಜಯಗೋಪಾಲದಾಸನ ತೋಟದ ಮನೆಯಲ್ಲಿ ವಾಸಿಸುತ್ತಿದ್ದನು. ಶ್ರೀರಾಮಕೃಷ್ಣರು ಹೃದಯನೊಂದಿಗೆ ಅವನ ಮನೆಗೆ ಹೊರಟರು. ಆಗ ಕೇಶವಬಾಬುವು ತನ್ನ ಅನುಯಾಯಿಗಳೊಂದಿಗೆ ತೋಟದಲ್ಲಿದ್ದ ಕೊಳದಲ್ಲಿ ಸ್ನಾನಮಾಡುವುದಕ್ಕೆ ಅಣಿಯಾಗುತ್ತಿದ್ದನು. ಶ್ರೀರಾಮಕೃಷ್ಣರು ಕೇಶವಬಾಬುವನ್ನು ತೋರಿಸುತ್ತಾ "ಇಲ್ಲಿರುವವ ರಲ್ಲೆಲ್ಲಾ ಇವನೊಬ್ಬನಿಗೆ ಮಾತ್ರವೆ ಬಾಲಬಿದ್ದುಹೋಗಿದೆ" ಎಂದರು. ಇದನ್ನು ಕೇಳಿ ಕೇಶವಚಂದ್ರನ ಅನುಯಾಯಿಗಳು ಗೊಳ್ಳನೆ ನಕ್ಕರು. ಕೇಶವಬಾಬುವು ಅವರಿಗೆ ಬುದ್ಧಿ ಹೇಳುವ ರೀತಿಯಲ್ಲಿ ಹಾಗೆ ನಗಬೇಡಿ, ಅವರ ಮಾತಿನಲ್ಲಿ ಆಳವಾದ ಅರ್ಥವಿಡೆ ಎಂದು ಹೇಳಿದನು. ಆಗ ಶ್ರೀರಾಮಕೃಷ್ಣರು ಹೀಗೆ ವಿವರಿಸಿದರು: "ಕಪ್ಪೆಯ ಬಾಲ ಕಳಚಿಹೋಗು ವವರೆಗೆ ಅದು ನೀರಿನಲ್ಲಿ ಮಾತ್ರ ಇರಬಲ್ಲದು. ಬಾಲ ಬಿದ್ದುಹೋದ ಮೇಲೆ ಅದು ನೀರಿನಲ್ಲಿ ಬೇಕಾದರೂ ಇರಬಹುದು, ನೆಲದಮೇಲೆ ಬೇಕಾದರೂ ಇರಬಹುದು. ಹೀಗೆಯೇ ದೇವರ ಧ್ಯಾನದಿಂದ ಯಾರ ಅಜ್ಞಾನದ ಬಾಲ ಬಿದ್ದುಹೋಗಿದೆಯೋ ಅವರು ತಮ್ಮ ಇಚ್ಛೆಯಂತೆ ದೇವರಲ್ಲಿ ಮುಳುಗಬಲ್ಲರು ಅಥವಾ ಪ್ರಪಂಚದಲ್ಲಿ ಇರಬಲ್ಲರು."

# ಸಾಧನಕ್ಕೆ ಆತಂಕ

೧. ನೀರಿನ ತಪ್ಪಲೆಯಲ್ಲಿ ಒಂದು ಸಣ್ಣತೂತು ಏನಾದರೂ ಇದ್ದರೆ ನೀರು ಕ್ರಮೇಣ ಸೋರಿಹೋಗುವುದು. ಇದರಂತೆ ಸಾಧಕನಲ್ಲಿ ಏನಾದರೂ ಸ್ವಲ್ಪ ಪ್ರಾಪಂಚಿಕತೆಯ ಸೋಂಕು ಇದ್ದರೂ ಅವನ ಪ್ರಯತ್ನ ವೆಲ್ಲಾ ನಿಷ್ಫಲವಾಗುವುದು.

೨. ಹಸಿಯ ಜೇಡಿಯಮಣ್ಣಿಗೆ ಆಕಾರವನ್ನು ಕೊಡಬಹುದು. ಆದರೆ ಸುಟ್ಟ ಮಣ್ಣಿಗೆ ಆಗುವುದಿಲ್ಲ. ಹಾಗೆಯೆ ಯಾರ ಹೃದಯ ಪ್ರಾಪಂಚಿಕ ಬಯಕೆಗಳಿಂದ ಸುಟ್ಟಿವೆಯೋ ಅವರಿಗೆ ಧಾರ್ಮಿಕ ವಿಷಯ ರುಚಿಸುವುದಿಲ್ಲ.

೩. ಮರಳು ಮತ್ತು ಸಕ್ಕರೆ ಮಿಶ್ರವಾಗಿರಬಹುದು. ಆದರೆ ಇರುವೆ ಮರಳನ್ನು ಬಿಟ್ಟು ಸಕ್ಕರೆಯನ್ನು ತಿನ್ನುವುದು. ಹಾಗೆಯೇ ಯತಿಗಳು ಮತ್ತು ಪರಮಹಂಸರು ಅಸತ್ಯವಾದುದನ್ನು ಅಂದರೆ, ಕಾಮ ಕಾಂಚನಗಳನ್ನು ಧಿಃಕ್ಕರಿಸಿ ಸತ್ಯವನ್ನು ಅಂದರೆ, ಸಚ್ಚಿದಾನಂದವನ್ನು ಸ್ವೀಕರಿಸುವರು.

೪. ಎಣ್ಣೆ ತಗಲಿದ ಕಾಗದದ ಮೇಲೆ ಬರೆಯಲಾಗುವುದಿಲ್ಲ. ಇದರಂತೆಯೆ ಇಂದ್ರಿಯ ಭೋಗಾಭಿಲಾಷೆಗಳಿಂದ ಕೆಟ್ಟುಹೋದ ಮನಸ್ಸು ಭಗವಂತನ ವಿಷಯಕ್ಕೆ ಯೋಗ್ಯವಲ್ಲ. ಆದರೆ ಎಣ್ಣೆಯ ಕಾಗದದ ಮೇಲೆ ಸುಣ್ಣವನ್ನು ಬಳಿದರೆ ಅದರ ಮೇಲೆ ಬರೆಯಲು ಸಾಧ್ಯವಾಗು ವಂತೆ, ಮನಸ್ಸಿನ ಮೇಲೆ ವೈರಾಗ್ಯವನ್ನು ಲೇಪಿಸಿದರೆ ಬರೆಯಲು ಸಾಧ್ಯ ವಾಗುವುದು.

೫. ಸಾಧನೆಯಲ್ಲಿ ನಿರತರಾಗಿರುವಾಗ ಧಾರ್ಮಿಕ ವಿಷಯಗಳ ಗೋಜಿಗೆ ಹೋಗದವರೊಂದಿಗೆ ಸಂಪರ್ಕವನ್ನು ಇಟ್ಟುಕೊಳ್ಳಬೇಡ. ಅಂತಹವರು ಯಾರು ದೇವರನ್ನು ಪೂಜಿಸುತ್ತಾರೋ ಮತ್ತು ಆತನ ಧ್ಯಾನ ಮಾಡುತ್ತಾರೊ ಅವರನ್ನು ಅಣಕಿಸುವರು. ಅವರು ದೈವಭಕ್ತರನ್ನೂ ಧಾರ್ಮಿಕರನ್ನೂ ಹಂಗಿಸುವರು. ನೀನು ಅವರಿಂದ ದೂರವಿರು.

೬. ದನದ ಮಂದೆಗೆ ಒಂದು ಹೊಸಪ್ರಾಣಿ ಹೋದರೆ ಅದನ್ನು ಮಂದೆ ಬೇಗ ಓಡಿಸುವುದು. ಆದರೆ ಅದು ಒಂದು ಹಸುವೇ ಆದರೆ ಇತರ ದನಗಳು ಅದರ ದೇಹವನ್ನು ನೆಕ್ಕಿ ಸ್ನೇಹಮಾಡಿಕೊಳ್ಳುವುವು. ಇದರಂತೆಯೇ ಒಬ್ಬ ಭಕ್ತ ಇನ್ನೊಬ್ಬ ಭಕ್ತನನ್ನು ಸಂಧಿಸಿದರೆ ದೇವರ ವಿಚಾರ ಮಾತನಾಡುವರು. ಇಂತಹ ಸಂಗದಿಂದ ಇಬ್ಬರೂ ಅನ್ಯೋನ್ಯವಾಗಿ ಆನಂದಿಸುವರು. ಬೇರೆಯಾಗುವುದಕ್ಕೆ ಮನಸ್ಸು ಬರುವುದಿಲ್ಲ. ಆದರೆ ಹಾಸ್ಯಗಾರನೊಂದಿಗೆ ಬೆರೆಯಲು ಭಕ್ತನಿಗೆ ಮನಸ್ಸು ಬರುವುದಿಲ್ಲ.

೭. ಆಳವಿಲ್ಲದ ಭಾವಿಯಲ್ಲಿ ನೀರನ್ನು ಕುಡಿಯಬೇಕೆಂದು ಇಚ್ಛಿಸಿದರೆ, ನೀರನ್ನು ಕಲಕದೆ ಜೋಪಾನವಾಗಿ ಮೇಲಿಂದ ತೆಗೆದುಕೊಳ್ಳಬೇಕು. ಕಲಕಿದರೆ ಬಗ್ಗಡ ನೀರಿನೊಂದಿಗೆ ಬೆರೆಯುವುದು. ಇದರಂತೆಯೇ ದೇವರನ್ನು ತಿಳಿಯಬೇಕೆಂದು ನೀನು ಇಚ್ಛಿಸಿದರೆ ಗುರುವಿನಲ್ಲಿ ನಂಬಿಕೆ ಇಟ್ಟು ಸಾಧನೆಯಲ್ಲಿ ಮುಂದುವರಿ. ಶಾಸ್ತ್ರೀಯವಾದ ವಿಚಾರವಾಗಿ ಸುಮ್ಮನೆ ನಿಮ್ಮ ಶಕ್ತಿಯನ್ನು ವ್ಯಯಮಾಡಿಕೊಳ್ಳಬೇಡಿ. ನಿಮ್ಮ ಮೆದುಳು ಬಹಳ ಸುಲಭವಾಗಿ ಕದಡುವುದು.

೮. ರೋಗಿಯಮೇಲೆ, ಮಂತ್ರಹಾಕಿದ ಸಾಸಿವೆಕಾಳನ್ನು ಎರಚಿ ದೆವ್ವವನ್ನು ಬಿಡಿಸುವರು. ದೆವ್ವವೇ ಸಾಸಿವೆಕಾಳಿನ ಒಳಗೆ ಹೋಗಿದ್ದರೆ ಅದು ಹೇಗೆ ಬಿಡಿಸುತ್ತದೆ? ದೇವರನ್ನು ಧ್ಯಾನಿಸುವ ಮನಸ್ಸು ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತವಾಗಿದ್ದರೆ ಸಾಧನೆಯಲ್ಲಿ ನೀನು ಹೇಗೆ ಉತ್ತೀರ್ಣನಾಗುವೆ?

೯. ನಿಮ್ಮ ಮಾತು ಮತ್ತು ಆಲೋಚನೆ ಒಂದೇ ಆಗಿರಲಿ. ಅದೇ ನಿಜವಾದ ಸಾಧನೆ. ಅದಲ್ಲದೆ ಪ್ರಪಂಚವೇ ನನ್ನ ಸರ್ವಸ್ವ ಎಂಬ ನಂಬಿಕೆ ಚೆನ್ನಾಗಿ ಮನಸ್ಸಿನಲ್ಲಿ ಬೇರೂರಿರುವಾಗ "ಹೇ ದೇವರೆ ನೀನೇ ನನ್ನ ಸರ್ವಸ್ವ" ಎಂದು ಹೇಳಿದರೆ ನಿಮ್ಮ ಸಾಧನೆ ನಿಷ್ಫಲವಾಗುವುದರಲ್ಲಿ ಸಂದೇಹವಿಲ್ಲ.

೧೦. ಹೇಗೆ ದಾರ ಸ್ವಲ್ಪ ಕೆದರಿದ್ದರೂ ಸೂಜಿಯ ಕಣ್ಣಿನಲ್ಲಿ ಪ್ರವೇಶಿಸಲಾರದೋ ಹಾಗೆಯೆ ಒಬ್ಬನಲ್ಲಿ ಸ್ವಲ್ಪ ಆಸೆ ಇದ್ದರೂ ಅವನು ಪರಂಧಾಮವನ್ನು ಪ್ರವೇಶಿಸಲಾರ. ಮನಸ್ಸು ಆಸೆಯಿಂದ ಚಂಚಲಿಸದೆ ನಿಂತು ಪರಿಶುದ್ಧವಾದಾಗ ಒಬ್ಬನು ಪರಬ್ರಹ್ಮನನ್ನು ಹೊಂದಬಲ್ಲನು.

೧೧. ಯಾರು ಮೋಕ್ಷವನ್ನು ಅಪೇಕ್ಷಿಸುವರೋ ಅವರು ಕಾಮ ಕಾಂಚನಗಳಿಗೆ ಯಾವ ವಿಧದಲ್ಲಿಯೂ ಆಸಕ್ತರಾಗಿರಕೂಡದು. ಲವಲೇಶ ವಾದರೂ ಇಂತಹ ಆಸಕ್ತಿ ಇದ್ದರೆ ಅವನೆಂದಿಗೂ ಸಿದ್ಧನಾಗಲಾರ. ಮರಳಿರುವ ಬಾಣಲೆಯಲ್ಲಿ ಭತ್ತವನ್ನು ಹುರಿಯುತ್ತಿರುವಾಗ ಯಾವ ಕೆಲವು ಕಾಳು ನೆಗೆದು ಹೊರಕ್ಕೆ ಸಿಡಿಯುವುವೋ ಅವಕ್ಕೆ ಮಾತ್ರ ಸುಟ್ಟ ಗುರುತು ಇರುವುದಿಲ್ಲ. ಬಾಣಲೆಯಲ್ಲೇ ಇರುವ ಉಳಿದ ಕಾಳು ಒಂದಲ್ಲ ಒಂದು ಕಡೆ ಶಾಖದಿಂದ ಸೀದಿರುತ್ತವೆ.

೧೨. ಭೋಗಾಭಿಲಾಷೆಯ ಗುರಿಯನ್ನು ಇಟ್ಟುಕೊಂಡು ಯಾರೂ ಸಾಧನೆಯನ್ನು ಮಾಡದಿರಲಿ. ಯಾರು ದೇವರನ್ನು ಮಾತ್ರ ಆಶಿಸು ತ್ತಾರೆಯೋ ಅವರ ಬಯಕೆಗಳೆಲ್ಲ ಈಡೇರುವುವು.

೧೩. ನೀರು ಗಾಳಿಯಿಂದ ಅಲುಗಾಡಿದರೆ ಹೇಗೆ ಅದು ಒಂದು ವಸ್ತುವನ್ನು ಪ್ರತಿಬಿಂಬಿಸಿಲಾರದೋ ಹಾಗೆಯೆ ಮಾನಸಿಕ ಸರೋವರವೂ ಆಸೆ ಎಂಬ ಗಾಳಿಗೆ ಸಿಕ್ಕಿದರೆ ದೇವರನ್ನು ಪ್ರತಿಬಿಂಬಿಸಲಾರದು. ಉಚ್ಛ್ವಾಸ ನಿಶ್ವಾಸಗಳಿಂದ ಮನಸ್ಸು ಚಂಚಲವಾಗುವುದು. ಅದಕ್ಕೋ ಸ್ಕರವೆ ಯೋಗಿ ದೇವರ ಧ್ಯಾನಕ್ಕೆ ಮುಂಚೆ ಮನಸ್ಸನ್ನು ಏಕಾಗ್ರಗೊಳಿಸಿ ಉಚ್ಛ್ವಾಸ ನಿಶ್ವಾಸಗಳನ್ನು ಒಂದು ನಿಯಮಕ್ಕೆ ತರುವನು.

೧೪. ಯಾರು ತಮ್ಮ ಮನಸ್ಸನ್ನು ತಾವೇ ವಂಚಿಸದೆ ಇರುವರೊ ಅವರಿಗೇ ಮುಕ್ತಿ. ನಿಷ್ಕಪಟತೆ ಮತ್ತು ಶ್ರದ್ಧೆ, ಇವೇ ಮುಕ್ತಿಗೆ ಮಾರ್ಗ.

೧೫. ಹಾವನ್ನು ನೋಡಿದಾಗ "ಎಲೆ ತಾಯಿ ಮಾನಸ! ನಿನ್ನ ಮುಖವನ್ನು ಮುಚ್ಚಿ ಬಾಲವನ್ನು ಮಾತ್ರ ತೋರು" ಎಂದು ಹೇಳುವುದು ರೂಢಿ. ಅದರಂತೆಯೇ ಪ್ರಾಯದ ಹೆಂಗಸರನ್ನು ನೋಡಿದಾಗ ಆಕೆಯನ್ನು ನಿನ್ನ ತಾಯಿಯೆಂದು ತಿಳಿದು ನಮಸ್ಕರಿಸಬೇಕು. ಆಕೆಯ ಮುಖವನ್ನು ನೋಡುವ ಬದಲು ಕಾಲನ್ನು ನೋಡಬೇಕು. ನೀವು ಹಾಗೆ ಮಾಡಿದರೆ ಮೋಹಪಾಶದಿಂದ ಅಥವಾ ಭ್ರಷ್ಟತೆಯಿಂದ ಪಾರಾಗುವಿರಿ.

೧೬. ಪ್ರತಿಯೊಬ್ಬ ಸನ್ಯಾಸಿ ಮತ್ತು ದೇವಭಕ್ತನೂ ಸ್ತ್ರೀಕುಲ ವನ್ನೇ, ಅವರು ಪತಿವ್ರತೆಯರಾಗಲಿ ಅಲ್ಲದೆ ಇರಲಿ ಎಲ್ಲರನ್ನೂ ಜಗನ್ಮಾಯಿಯ ಅವತಾರಗಳೆಂದು ಭಾವಿಸಬೇಕು.

೧೭. ಯಾರು ಸರ್ಜನಪ್ರದೇಶದಲ್ಲಿ ಪ್ರಾಯದ ಹೆಂಗಸರನ್ನು ಸಂಧಿಸಿದಾಗ ಆಕೆಯನ್ನು ತಾಯಿಯೆಂದು ತಿಳಿದು ಮನಸ್ಸಿನಲ್ಲಿ ನಮಸ್ಕರಿಸಿ ಅವರನ್ನು ನೋಡದೆ ಹೋಗುವನೋ ಅವನಲ್ಲಿಯೇ ನಿಜವಾದ ವೈರಾಗ್ಯ ಭಾವವಿರುವುದು. ಕೇವಲ ತೋರಿಕೆಗಾಗಿ ಯಾರು ಜನರೆದುರಿನಲ್ಲಿ ಹಾಗೆ ಮಾಡುವರೋ ಅವರನ್ನು ನಿಜವಾದ ತ್ಯಾಗಿ ಗಳೆಂದು ಹೇಳಲಾಗುವುದಿಲ್ಲ.

೧೮. ಅಹಂಕಾರ ಬೀಜವನ್ನು ಸುಲಭವಾಗಿ ನಾಶಮಾಡುವುದಕ್ಕೆ ಆಗುವುದಿಲ್ಲ. ಕುರಿಯ ತಲೆಯನ್ನು ದೇಹದಿಂದ ಬೇರ್ಪಡಿಸಿದಮೇಲೆ ಅದು ಸಂಪೂರ್ಣವಾಗಿ ಸಾಯುವವರೆಗೆ ಕೆಲವುಕಾಲ ಮುಂಡ ಚಲಿ ಸುವುದು. ಇದರಂತೆಯೇ ಒಬ್ಬನ ಅಹಂಕಾರವೂ ಕೂಡ.

೧೯. ಒಬ್ಬನು ಅಹಂಕಾರದಿಂದ ಪಾರಾಗುವುದು ಕಷ್ಟ. ಯಾವ ಬಟ್ಟಲಲ್ಲಿ ಈರುಳ್ಳಿ ಅಥವಾ ಬೆಳ್ಳುಳ್ಳಿಯ ರಸವನ್ನು ಇಟ್ಟಿರುವಿರೊ ಅದನ್ನು ನೂರಾರು ವೇಳೆ ತೊಳೆದರೂ ಆ ವಾಸನೆ ಇನ್ನೂ ಇರುವುದು. ಇದರಂತೆಯೆ ಒಬ್ಬನ ಅಹಂಕಾರದ ಗುರುತು ಯಾವಾಗಲೂ ಹಿಂದೆ ಇದ್ದೇ ಇರುವುದು.

೨೦. ನಿಜವಾದ ಸನ್ಯಾಸಿ (ಪ್ರಪಂಚವನ್ನು ತ್ಯಜಿಸಿದವನು) ಅಥವಾ ತ್ಯಾಗಿಯ (ಅನಾಸಕ್ತನಾಗಿರುವವನು) ಗುರುತು ಏನು? ಇಬ್ಬರಿಗೂ ಕಾಮಕಾಂಚನಗಳ ಸಂಬಂಧವಿರಕೂಡದು. ಇಬ್ಬರಲ್ಲಿ ಯಾರಾದರೂ ಕಾಂಚನಕ್ಕೆ ಆಸಕ್ತರಾದರೂ ಅಥವಾ ಸ್ವಪ್ನದಲ್ಲಾದರೂ ಕಾಮಪಾಶಕ್ಕೆ ಬಿದ್ದರೊ, ಅವರ ಸಾಧನೆಯೆಲ್ಲ ನಿಷ್ಫಲವಾದಂತೆ.

೨೧. ದೇವರು ನಾವು ಕೇಳಿದುದನ್ನು ಕೊಡುವ ಕಲ್ಪತರುವಿನಂತೆ. ಆಧ್ಯಾತ್ಮಿಕ ಸಾಧನೆಗಳಿಂದ ಮನಸ್ಸು ಶುದ್ಧವಾದ ಮೇಲೆ ಪ್ರಾಪಂಚಿಕ ಬಯಕೆಗಳನ್ನೆಲ್ಲ ಬಿಡುವುದರಲ್ಲಿ ಜೋಪಾನವಾಗಿರಬೇಕು. ಒಂದು ಕಥೆ ಯನ್ನು ಕೇಳಿ: ಒಬ್ಬ ಪ್ರಯಾಣಿಕ ನಡೆಯುತ್ತಿದ್ದಾಗ ಒಂದು ದೊಡ್ಡ ಬಯಲಿಗೆ ಬಂದನು. ಅನೇಕ ಗಂಟೆ ಕಾಲ ಬಿಸಿಲಿನಲ್ಲಿ ನಡೆಯುತ್ತಿದ್ದು ದರಿಂದ ತುಂಬ ಆಯಾಸವಾಗಿ ಬೆವರು ಸುರಿಸುತ್ತಿದ್ದನು. ಆಗ ಸ್ವಲ್ಪ ವಿಶ್ರಾಂತಿಗಾಗಿ ಮರದ ಕೆಳಗೆ ಕುಳಿತುಕೊಂಡನು. ಮಲಗಿಕೊಳ್ಳುವುದಕ್ಕೆ

ಒಂದು ಮೆತ್ತನೆ ಹಾಸಿಗೆ ಇದ್ದರೆ ಎಷ್ಟು ಚೆನ್ನಾಗಿರುವುದು ಎಂದು ಆಲೋಚಿಸಿದನು. ಪ್ರಯಾಣಿಕನಿಗೆ ತಾನು ಕಲ್ಪತರುವಿನ ಕೆಳಗೆ ಕುಳಿತುಕೊಂಡಿರುವೆನು ಎಂಬುದು ತಿಳಿಯಲಿಲ್ಲ. ಆ ಆಲೋಚನೆ ಮನಸ್ಸಿನಲ್ಲಿ ಹೊಳೆದ ತಕ್ಷಣವೇ ತನ್ನ ಪಕ್ಕದಲ್ಲಿ ಒಂದು ಮೆತ್ತನೆಯ ಸುಪ್ಪತ್ತಿಗೆಯನ್ನು ಕಂಡನು. ಇದನ್ನು ನೋಡಿ ಅತ್ಯಾಶ್ಚರ್ಯವಾಯಿತು. ಆದರೂ ಅದರ ಮೇಲೆ ಮಲಗಿಕೊಂಡನು. ಆಗ ಒಬ್ಬ ಯುವತಿ ಬಂದು ತನ್ನ ಕಾಲನ್ನು ಒತ್ತಿದರೆ ಎಷ್ಟು ಚೆನ್ನಾಗಿರುತ್ತದೆ ಎಂದು ಯೋಚಿಸಿದನು. ಈ ಆಲೋಚನೆ ಅವನ ಮನಸ್ಸಿನಲ್ಲಿ ಹೊಳೆದೊಡನೆಯೆ ಒಬ್ಬ ಯುವತಿ ಅವನ ಪಾದಗಳ ಹತ್ತಿರ ಕುಳಿತುಕೊಂಡು ಒತ್ತುತ್ತಿರುವುದನ್ನು ಕಂಡನು. ಪ್ರಯಾಣಿಕನಿಗೆ ಅತ್ಯಂತ ಆನಂದವಾಯಿತು. ಆಗ ಹಸಿವಾಯಿತು. "ಬೇಕಾದುದೆಲ್ಲ ಸಿಕ್ಕಿತು, ಸ್ವಲ್ಪ ಆಹಾರ ಸಿಕ್ಕುವುದಿಲ್ಲವೆ" ಎಂದು ಮನಸ್ಸಿನಲ್ಲಿ ಅಂದುಕೊಂಡನು. ತಕ್ಷಣವೇ ಹಲವು ವಿಧದ ರುಚಿಕರವಾದ ಪದಾರ್ಥಗಳು ಅವನ ಮುಂದಿರುವುದನ್ನು ಕಂಡನು. ಕೂಡಲೆ ಊಟ ಮಾಡಲು ಮೊದಲುಮಾಡಿದನು. ತೃಪ್ತಿಯಾಗುವತನಕ ಊಟಮಾಡಿದ ಮೇಲೆ ಹಾಸಿಗೆಯ ಮೇಲೆ ಪುನಃ ಮಲಗಿಕೊಂಡನು. ಆಗ ಅಂದು ಆದುದನ್ನೆಲ್ಲ ಮನಸ್ಸಿನಲ್ಲಿ ನೆನೆಯಲು ಮೊದಲುಮಾಡಿದನು. ಹೀಗೆ ನಿರತನಾಗಿರುವಾಗ ತಕ್ಷಣವೆ ಒಂದು ಹುಲಿ ತನ್ನನ್ನು ಹಿಡಿದುಬಿಟ್ಟರೆ ಎಂದು ಆಲೋಚಿಸಿದನು ಮರುಕ್ಷಣದಲ್ಲಿಯೆ ಅವನ ಮೇಲೆ ದೊಡ್ಡ ಹುಲಿಯೊಂದು ನೆಗೆದು ಕತ್ತನ್ನು ಮುರಿದು ಅವನ ರಕ್ತವನ್ನು ಹೀರಲು ಪ್ರಾರಂಭಿಸಿತು. ಹೀಗೆ ಪ್ರಯಾಣಿಕನು ತನ್ನ ಪ್ರಾಣವನ್ನು ಕಳೆದುಕೊಂಡನು. ಸಾಧಾರಣ ಮನುಷ್ಯರ ಹಣೆಯ ಬರಹವೇ ಹೀಗೆ. ನೀವು ಧ್ಯಾನಮಾಡುತ್ತಿರುವಾಗ ಹಣ, ಕೀರ್ತಿ, ಮನುಷ್ಯರು ಮುಂತಾದುವುಗಳನ್ನು ಪ್ರಾರ್ಥಿಸಿದರೆ ನಿಮ್ಮ ಬಯಕೆ ಸ್ವಲ್ಪಮಟ್ಟಿಗಾದರೂ ಸಂಶಯವಿಲ್ಲದೆ ಈಡೇರುವುದು. ಆದರೆ ಜೋಪಾನವಾಗಿರಿ! ನಿಮಗೆ ಸಿಕ್ಕುವ ವರದ ಹಿಂದೆ ಹುಲಿ ಇರುವ ಅಂಜಿಕೆ ಇದೆ. ರೋಗ, ಸಾವು, ಅಪಕೀರ್ತಿ, ದ್ರವ್ಯನಾಶ ಇಂತಹ ಹುಲಿ ಬದುಕಿರುವ ನಿಜವಾದ ಹುಲಿಗಿಂತ ಸಾವಿರ ಪಾಲು ಘೋರತರ.

೨೨. ಒಬ್ಬನಿಗೆ ಇದ್ದಕ್ಕಿದ್ದಂತೆಯೇ ವೈರಾಗ್ಯಭಾವ ಬಂದಿತು.

ಅವನು ತನ್ನ ಸ್ನೇಹಿತರಿಗೆ ಇನ್ನುಮೇಲೆ ಪ್ರಪಂಚದ ಭೋಗ ತನಗೆ ಯಾವ ವಿಧವಾದ ಆಸೆಯನ್ನೂ ಹುಟ್ಟಿಸಲಾರದು ಎಂದನು. ನಿರ್ಜನ ಪ್ರದೇಶಕ್ಕೆ ಹೋಗಿ ದೇವರಧ್ಯಾನದಲ್ಲಿ ನಿರತರಾಗಿರಬೇಕೆಂದು ಬಯಸಿದನು. ಇವನ ಯೋಗ್ಯವಾದ ಉದ್ದೇಶವನ್ನು ಅವರೆಲ್ಲರೂ ತಕ್ಷಣವೇ ಅನುಮೋದಿಸಿದರು. ಮನೆಯನ್ನು ಬಿಟ್ಟು ನಿರ್ಜನ ಪ್ರದೇಶದಲ್ಲಿ ಹನ್ನೆರಡು ವರುಷಗಳು ಕಠೋರ ತಪಸ್ಸಿನಲ್ಲಿ ನಿರತನಾಗಿದ್ದನು. ಇದರಿಂದ ಕೆಲವು ಅದ್ಭುತಶಕ್ತಿಯನ್ನು ಪಡೆದು ಮನೆಗೆ ಹಿಂದಿರುಗಿದನು. ಇಷ್ಟು ದಿನಗಳಾದಮೇಲೆ ಇವನನ್ನು ನೋಡಿ ಸ್ನೇಹಿತರು ಆನಂದಿಸಿದರು. ಮಾತನಾಡುತ್ತಿದ್ದಾಗ ಇಷ್ಟು ದಿನಗಳ ಘೋರ ತಪಸ್ಸಿನಿಂದ ಅವನು ಏನನ್ನು ಸಾಧಿಸಿರುವನು ಎಂದು ಕೇಳಿದರು. ಇದನ್ನು ಕೇಳಿ ಅವನು ಮಂದಹಾಸದಿಂದ ನಗುತ್ತ ಅಲ್ಲಿ ಹೋಗುತ್ತಿದ್ದ ಒಂದು ಆನೆಯ ಹತ್ತಿರ ಹೋಗಿ ಅದರ ದೇಹವನ್ನು ಮುಟ್ಟಿ "ಎಲೆ ಆನೆ ತಕ್ಷಣವೆ ನೀನು ಸಾಯಿ" ಎಂದನು. ತಕ್ಷಣವೆ ಪ್ರಾಣಿಯಲ್ಲಿ ಜೀವನದ ಚಿಹ್ನೆ ನಿಂತಿತು. ಸ್ವಲ್ಪ ಹೊತ್ತಾದಮೇಲೆ ಅದನ್ನು ಪುನಃ ಮುಟ್ಟಿ "ಆನೆ, ಪುನಃ ಜೀವತಾಳು" ಎಂದನು. ತಕ್ಷಣವೆ ಪ್ರಾಣಿಗೆ ಪುನಃ ಜೀವ ಬಂದಿತು. ಅನಂತರ ಅವನು ತನ್ನ ಮನೆಯ ಹತ್ತಿರ ಹರಿಯುತ್ತಿದ್ದ ನದಿಗೆ ಹೋಗಿ ಕೆಲವು ಮಂತ್ರಗಳನ್ನು ಉಚ್ಚಾರಣೆಮಾಡಿ ನದಿಯ ಮೇಲೆ ನಡೆದುಕೊಂಡು ಹೋಗಿ ಪುನಃ ಮನೆಗೆ ಹಿಂತಿರುಗಿದನು. ಅವನ ಸ್ನೇಹಿತರಿಗೆ ಇವನ್ನು ನೋಡಿ ತುಂಬಾ ಆಶ್ಚರ್ಯವಾಯಿತು ಆದರೂ ಕೂಡ ಅವರಿಗೆ ಹೀಗೆ ಹೇಳದಿರಲು ಆಗಲಿಲ್ಲ: "ಸಹೋದರನೆ, ನಿನ್ನ ತಪಸ್ಸಿನಿಂದ ಏನೂ ಪ್ರಯೋಜನವಿಲ್ಲ. ನಿನ್ನ ಪಾಲಿಗೆ ಆನೆ ಸತ್ತರೇನು ಉಳಿದರೇನು? ನೀನು ಹನ್ನೆರಡು ವರ್ಷಗಳ ಕಠಿಣ ತಪಸ್ಸಿನಿಂದ ಕಲಿತ, ನೀರಿನ ಮೇಲೆ ನಡೆಯುವುದನ್ನು, ದೋಣಿಯವನಿಗೆ ಒಂದು ಕಾಸನ್ನು ಕೊಡುವುದರಿಂದ ಮಾಡುತ್ತೇವೆ. ಆದಕಾರಣ ನಿನ್ನ ತಪಸ್ಸೆಲ್ಲ ಸುಮ್ಮನೆ ವ್ಯರ್ಥವಾಯಿತು" ಎಂದರು. ಈ ಪರಿಹಾಸ್ಯದಿಂದ ಅವನಿಗೆ ಬುದ್ಧಿ ಬಂದಿತು. ನಿಜವಾಗಿಯೂ ಈ ಪವಾಡಗಳಿಂದ ನನಗೆ ಏನು ಪ್ರಯೋಜನವಾಯಿತು? ಎಂದು ಯೋಚಿಸ ತೊಡಗಿದನು. ಅನಂತರ ಅವನು ಪುನಃ ನಿಜವಾದ ಭಕ್ತಿಯಿಂದ ದೇವರನ್ನು ಹೊಂದಲು ಮನೆಯನ್ನು ಬಿಟ್ಟನು.

೨೩. ತಾನು ಬಹಳ ಬುದ್ಧಿವಂತನೆಂದು ತಿಳಿದುಕೊಳ್ಳುವುದು ಮೂರ್ಖತನ, ಕಾಗೆ ಒಂದು ದೃಷ್ಟಿಯಿಂದ ಬಹಳ ಚುರುಕು. ಅದಕ್ಕೆ ಕೂಡ ಹಾಗೇ ತಿಳಿದುಕೊಳ್ಳುವುದು. ಆದರೂ ಕೂಡ ಅದು ಹೇಸಿಗೆಯ ಮೇಲೆ ಜೀವಿಸಬೇಕಾಗಿದೆ. ಇವರಂತೆಯೆ ಸುಳ್ಳು ಹೇಳುವವನು ಕೂಡ ಯಾವುದನ್ನು ಪ್ರಾಪಂಚಿಕ ಬುದ್ಧಿವಂತಿಕೆಯೆಂದು ತಿಳಿದುಕೊಂಡಿರುವನೊ ಅದು ಕೇವಲ ಹೀನ ಉಪಾಯಕ್ಕಿಂತ ಮೇಲಲ್ಲ. ಇವರಿಂದ ಆತ್ಮನಾಶವನ್ನು ತಂದುಕೊಳ್ಳುವನು.

೨೪. ಒಂದು ದಿನ ಗಂಗಾನದಿಯ ತೀರದಲ್ಲಿ, ಒಂದು ಕೈಯಲ್ಲಿ ರೂಪಾಯಿ, ಒಂದು ಕೈಯಲ್ಲಿ ಬಗನೆ ಮಣ್ಣು ಹಿಡಿದುಕೊಂಡು ನಿಂತು, ಅವುಗಳೆರಡನ್ನೂ ವಿಮರ್ಶೆಮಾಡಿ, ಅವೆರಡೂ ಒಂದೇ ಎಂಬ ನಿರ್ಧಾರಕ್ಕೆ ಬಂದು ಅವೆರಡನ್ನೂ ನದಿಗೆ ಬಿಸಾಟಿನು. ಆದರೆ ಇವರಿಂದ ನನಗೆ ಸ್ವಲ್ಪ ಕಳವಳವಾಯಿತು. ಇದರಿಂದ ನಾನು ಲಕ್ಷ್ಮಿಗೆ ಏನಾದರೂ ತಪ್ಪುಮಾಡಿರಬಹುದು, ಅವಳು ನನ್ನ ಆಹಾರವನ್ನು ನಿಲ್ಲಿಸಬಹುದೆಂದು ಯೋಚಿಸಿದೆ! ತಕ್ಷಣವೆ ಮನಸ್ಸಿನಲ್ಲಿ ಮತ್ತೊಂದು ಆಲೋಚನೆ ಎದ್ದಿತು, "ಹೇ ತಾಯಿ, ಲಕ್ಷ್ಮಿ, ನನ್ನ ಹೃದಯವನ್ನು ನಿನ್ನ ಪೀಠವನ್ನಾಗಿ ಮಾಡು. ನಿನ್ನ ಯಾವ ಐಶ್ವರ್ಯವೂ ನನಗೆ ಬೇಕಾಗಿಲ್ಲ" ಎಂದೆ.

೨೫. ದೇವರು ಎರಡು ಸಮಯದಲ್ಲಿ ನಗುವನು. ಮೊದಲನೆಯದು, ಇಬ್ಬರು ಅಣ್ಣತಮ್ಮಂದಿರು ತಮ್ಮ ತಂದೆ ಬಿಟ್ಟು ಹೋದ ಜಮೀನನ್ನು ಒಂದು ದಾರದಿಂದ ಅಳೆದು ವಿಭಾಗಿಸಿಕೊಳ್ಳುತ್ತ. ಈ ಕಡೆ ನನ್ನದು, ಆ ಕಡೆ ನಿನ್ನದು" ಎನ್ನುವಾಗ. ಎರಡನೆಯದು: "ರೋಗಿಯು ಉತ್ಕಟಾವಸ್ಥೆಯಲ್ಲಿ ನರಳುವಾಗ ವೈದ್ಯ ಅಳುತ್ತಿರುವ ರೋಗಿಯ ಬಂಧುಗಳಿಗೆ, "ಅಂಜಬೇಡಿ, ರೋಗಿ ಗುಣಮುಖವಾಗುವುದಕ್ಕೆ ನಾನು ಜವಾಬ್ದಾರಿ" ಎನ್ನುವಾಗ ದೇವರು ಯಾರನ್ನು ನಾಶಮಾಡಬೇಕೆಂದು ಬಯಸುವನೋ ಅವನನ್ನು ಉಳಿಸುವುದಕ್ಕೆ ಯಾರಿಂದಲೂ ಆಗುವುದಿಲ್ಲವೆಂಬುದು ಆ ಮೂರ್ಖ ವೈದ್ಯನಿಗೆ ತಿಳಿಯದು.

೨೬. ಭಗವಾನ್ ಶ್ರೀಕೃಷ್ಣ ಅರ್ಜುನನಿಗೆ ಹೀಗೆ ಹೇಳಿದನು: "ಅಷ್ಟ ಸಿದ್ಧಿಗಳಲ್ಲಿ ಒಂದು ನಿನಗೆ ಬಂದರೂ ಕೂಡ ನನ್ನ ಅತ್ಯುತ್ತ

ಮಾವಸ್ಥೆಯನ್ನು ತಿಳಿಯಲಾರೆ" ನಿಜವಾದ ಭಕ್ತ ಎಂದಿಗೂ ಇಂತಹ ಸಿದ್ಧಿಗಳಿಗೆ ಆಶಿಸಕೂಡದು.

೨೭. ಸಾಧುಗಳನ್ನು ಪ್ರೀತಿಸುತ್ತಿದ್ದ ಲಕ್ಷ್ಮೀನಾರಾಯಣನೆಂಬ ಮಾರ್ವಾಡಿ ಒಂದು ದಿನ ಶ್ರೀರಾಮಕೃಷ್ಣರ ದರ್ಶನಕ್ಕೆ ಬಂದನು. ಅವರು ಬಹುಕಾಲ ವೇದಾಂತ ಮುಂತಾದ ಗ್ರಂಥಗಳ ಮೇಲೆ ಮಾತನಾಡಿದರು. ಶ್ರೀರಾಮಕೃಷ್ಣರ ವಿವರಣೆಯನ್ನು ಕೇಳಿ ಅವನಿಗೆ ತುಂಬಾ ಸಂತೋಷವಾಯಿತು. ಅವರಿಂದ ಬೀಳ್ಕೊಳ್ಳುವುದಕ್ಕೆ ಮುಂಚೆ ಅವರ ಸೇವೆಗಾಗಿ ಹತ್ತುಸಾವಿರ ರೂಪಾಯಿಗಳನ್ನು ಕೊಡುವುದಾಗಿ ಹೇಳಿದನು. ಈ ಸಲಹೆ ಶ್ರೀರಾಮಕೃಷ್ಣರಿಗೆ ತಮ್ಮ ತಲೆಯ ಮೇಲೆ ಹೊಡೆದ ಒಂದು ಪೆಟ್ಟಿನಂತೆ ಆಯಿತು. ಅವರು ಮೂರ್ಛಾಪನ್ನರಾಗುವ ಸ್ಥಿತಿಯಲ್ಲಿದ್ದರು. ಸ್ವಲ್ಪ ಪ್ರಜ್ಞೆ ಬಂದಮೇಲೆ ಸಣ್ಣ ಹುಡುಗನಂತೆ ಅವನ ಸಲಹೆಗೆ ಜಿಗುಪ್ಸೆಯನ್ನು ಸೂಚಿಸುತ್ತ "ತಕ್ಷಣವೆ ಕೋಣೆಯನ್ನು ಬಿಟ್ಟು ಹೊರಡು. ಐಶ್ವರ್ಯದ ಆಸೆಯನ್ನು ತೋರಿ ನನ್ನನ್ನು ಪ್ರಪಂಚಕ್ಕೆ ಎಳೆಯಬೇಕೆಂದು ಬಯಸುವೆಯ ?" ಎಂದರು. ಶ್ರೀರಾಮಕೃಷ್ಣರನ್ನು ಪ್ರೀತಿಸುತ್ತಿದ್ದ ಲಕ್ಷ್ಮೀನಾರಾಯಣನಿಗೆ ಸ್ವಲ್ಪ ಅಸಮಾಧಾನವಾಯಿತು. ಆಗ "ಸ್ವಾಮಿ ನೀವು ಅತ್ಯುತ್ತಮ ಸ್ಥಿತಿಗಿಂತ ಸ್ವಲ್ಪ ಕಡಿಮೆ" ಎಂದನು. ಶ್ರೀರಾಮಕೃಷ್ಣರು ಅದು ಹೇಗೆ? ಎಂದರು. ಅದಕ್ಕೆ ಅವನು "ನಿಜವಾದ ಸಿದ್ಧನಿಗೆ ಏನು ಕೊಟ್ಟರೂ ಅವನು ಅದರ ಸ್ವೀಕಾರ ಮತ್ತು ಅಸ್ವೀಕಾರದ ವಿಷಯವಾಗಿ ಏನನ್ನೂ ನಿರ್ಣಯಿಸುವುದಿಲ್ಲ. ಏನಾದರೂ ಅವನಿಗೆ ಕೊಟ್ಟರೆ ಸಂತೋಷವೂ ಇಲ್ಲ, ಏನಾದರೂ ಅವನಿಂದ ತೆಗೆದುಕೊಂಡು ಹೋದರೆ ಅಸಮಾಧಾನವೂ ಇಲ್ಲ" ಎಂದನು. ಶ್ರೀರಾಮಕೃಷ್ಣರು ಸ್ವಲ್ಪ ಮಂದಹಾಸವನ್ನು ಬೀರಿ ಅವನಿಗೆ ತಮ್ಮ ಸ್ಥಿತಿಯನ್ನು ವರ್ಣಿಸಿದರು. "ಕನ್ನಡಿಯ ಮೇಲೆ ಸಣ್ಣ ಚುಕ್ಕೆ ಇದ್ದರೂ ಅದು ಮುಖವನ್ನು ಚೆನ್ನಾಗಿ ಪ್ರತಿಬಿಂಬಿಸಲಾರದು. ಇದರಂತೆಯೇ ಶುದ್ಧವಾದ ಮನಸ್ಸಿನಲ್ಲಿ ಕಾಂಚನದ ನೆರಳು ಕೂಡ ಇರಲು ಯೋಗ್ಯವಲ್ಲ" ಎಂದರು. ಭಕ್ತನು "ಅದು ಒಳ್ಳೆಯದೆ ನಿಮ್ಮನ್ನು ಸೇವಿಸುವ ಹೃದಯ ನಿಮಗಾಗಿ ಹಣವನ್ನು ಇಟ್ಟುಕೊಂಡಿರಬಹುದಲ್ಲ" ಎಂದನು. "ಇಲ್ಲಿ ಇದನ್ನು ಮಾಡಲೂ ಸಾಧ್ಯವಿಲ್ಲ. ಉದಾಹರಣೆಗೆ, ಹೃದಯನಿಗೆ ನಾನು ಯಾರಿಗಾದರೂ

ಏನನ್ನಾದರೂ ಕೊಡು ಎಂದು ಹೇಳಿದೆ, ಅಥವಾ ನಾನೆ ಯಾವುದಾದರೂ ಖರ್ಚುಮಾಡಬೇಕೆಂದು ಕೇಳಿದೆ ಎಂದು ಇಟ್ಟುಕೊಳ್ಳೋಣ. ಅವನು ಅದಕ್ಕೆ ಆಕ್ಷೇಪಣೆ ಮಾಡಬಹುದು. ಆಗ ನನ್ನ ಮನಸ್ಸಿನಲ್ಲಿ ದುಡ್ಡನ್ನು ಅವನು ನನಗೋಸ್ಕರವಾಗಿ ಇಟ್ಟುಕೊಂಡಿರುವನು ಎಂಬ ಭಾವನೆ ಬರುವುದು. ಇದೂ ಕೂಡ ಯೋಗ್ಯವಲ್ಲ" ಎಂದರು ಶ್ರೀರಾಮಕೃಷ್ಣರು. ಲಕ್ಷ್ಮೀನಾರಾಯಣ ಆಶ್ಚರ್ಯಚಕಿತನಾಗಿ ಈ ವಿವರಣೆಯನ್ನು ಕೇಳಿ, ಶ್ರೀರಾಮಕೃಷ್ಣರ ಅಸಾಧಾರಣವಾದ ತ್ಯಾಗವನ್ನು ಕಂಡು ತೃಪ್ತನಾಗಿ ಮನೆಗೆ ಹಿಂತಿರುಗಿದನು.

೨೮. ಐಶ್ವರ್ಯಕ್ಕಾಗಿ ಜಂಭ ಕೊಚ್ಚಿಕೊಳ್ಳುವುದು ಮೂರ್ಖತನ. ನೀನು ಐಶ್ವರ್ಯವಂತನಾದರೆ ನಿನಗಿಂತ ಹೆಚ್ಚು ಐಶ್ವರ್ಯವಂತರಿರುವರು ಎಂದು ತಿಳಿದುಕೊ. ಸಂಜೆ ಮಿಂಚು ಹುಳುಗಳು ಬಂದಾಗ ತಾವೆ ಜಗತ್ತನ್ನು ಬೆಳಗುತ್ತಿರುವೆವು ಎಂದು ಭಾವಿಸುವುವು. ನಕ್ಷತ್ರಗಳು ಹುಟ್ಟಿದ ತಕ್ಷಣವೇ ಅದರ ಜಂಭ ಮಾಯವಾಗುತ್ತದೆ. ಆಗ ನಕ್ಷತ್ರಗಳು ನಾವು ಪ್ರಪಂಚವನ್ನು ಬೆಳಗುತ್ತಿರುವೆವು ಎಂದು ಆಲೋಚಿಸುವುವು. ಆದರೆ ಚಂದ್ರ ಹುಟ್ಟಿದ ತಕ್ಷಣವೆ ಇವು ನಾಚಿಕೆಯಿಂದ ಮಾಯವಾದಂತೆ ಕಾಣುವುವು. ಈಗ ಚಂದ್ರ ತನ್ನ ಕಾಂತಿಯಿಂದ ಜಗತ್ತನ್ನು ಬೆಳಗು ತ್ತಿರುವೆನು ಎಂದು ಯೋಚಿಸುತ್ತಾನೆ. ಆದರೆ ಸೂರ್ಯ ಹುಟ್ಟುತ್ತಲೆ ತನ್ನ ಕಾಂತಿಯನ್ನು ಕಳೆದುಕೊಂಡು ಕಣ್ಣಿಗೆ ಕಾಣಿಸದಂತೆ ಆಗುವನು. ಯಾರು ತಾವು ಐಶ್ವರ್ಯವಂತರು ಎಂದು ತಿಳಿದುಕೊಂಡಿರುವರೋ ಅವರು ವಸ್ತುತಃ ಸಹಜಸ್ಥಿತಿಯನ್ನು ಆಲೋಚಿಸಿದರೆ ಅವರು ಮತ್ತೊಮ್ಮೆ ತಮ್ಮ ಐಶ್ವರ್ಯದ ವಿಚಾರವಾಗಿ ಎಂದಿಗೂ ಜಂಭ ಕೊಚ್ಚಿಕೊಳ್ಳುವುದಿಲ್ಲ.

೨೯. "ಎಲ್ಲಾ ಒಂದು ಕೌಪೀನಕ್ಕಾಗಿ" ಕಥೆಯನ್ನು ಕೇಳಿ: ತನ್ನ ಗುರುವಿನ ಅಪ್ಪಣೆಯಂತೆ ಸಾಧುವೊಬ್ಬನು ಜನಸಂದಣಿಗೆ ದೂರ ವಾಗಿ ತನಗೆ ಇರುವುದಕ್ಕಾಗಿ ಗುಡಿಸಲನ್ನು ಕಟ್ಟಿ ಎಲೆಗಳಿಂದ ಅದನ್ನು ಹೊದಿಸಿದನು. ಈ ಪರ್ಣಶಾಲೆಯಲ್ಲಿ ತನ್ನ ಸಾಧನೆಯನ್ನು ಮೊದಲು ಮಾಡಿದನು. ಪ್ರತಿದಿನವೂ ಸ್ನಾನವಾದಮೇಲೆ ತನ್ನ ಪಂಚೆಯನ್ನು ಮತ್ತು ಕೌಪೀನವನ್ನು ಗುಡಿಸಲಿನ ಹತ್ತಿರವಿದ್ದ ಒಂದು ಮರದ ಹತ್ತಿರ ಒಣಗಲು ಹಾಕುತ್ತಿದ್ದನು. ಹತ್ತಿರದ ಹಳ್ಳಿಗೆ ಹೋಗಿ ಭಿಕ್ಷಾನ್ನವನ್ನು

ತಂದ ಮೇಲೆ ನೋಡಲಾಗಿ ಇಲಿಗಳು ಅವನ ಕೌಪೀನವನ್ನು ಚೂರು ಮಾಡಿದ್ದುವು. ಇದರಿಂದ ಮತ್ತೊಂದು ಹೊಸ ಚೂರಿಗಾಗಿ ಹಳ್ಳಿಗೆ ಹೋಗಿ ಬೇಡಬೇಕಾಗಿತ್ತು. ಕೆಲವು ದಿನಗಳಾದ ಮೇಲೆ ಸಾಧು ಬಟ್ಟೆಯನ್ನು ತನ್ನ ಪರ್ಣಶಾಲೆಯಮೇಲೆ ಒಣಹಾಕಿ ಎಂದಿನಂತೆ ಭಿಕ್ಷೆ ಬೇಡುವುದಕ್ಕೆ ಹಳ್ಳಿಗೆ ಹೋದನು. ಹಿಂತಿರುಗಿ ಬಂದು ನೋಡಲಾಗಿ ಇಲಿಗಳು ಆ ಬಟ್ಟೆಯನ್ನೂ ಚೂರುಚೂರು ಮಾಡಿದ್ದವು. ಅವನಿಗೆ ತುಂಬ ರೇಗಿತು. "ಮತ್ತೊಂದು ಬಟ್ಟೆ ಚೂರನ್ನು ಕೇಳುವುದಕ್ಕೆ ಎಲ್ಲಿಗೆ ಹೋಗಲಿ. ಯಾರನ್ನು ಕೇಳಲಿ" ಎಂದುಕೊಂಡನು. ಆದರೂ ಹಳ್ಳಿಯವರನ್ನು ಮಾರನೆ ದಿನ ಕಂಡು, ಇಲಿಗಳ ಹಾವಳಿಯನ್ನು ಅವರಿಗೆ ಹೇಳಿದನು. ಈತನು ಹೇಳುವುದನ್ನೆಲ್ಲ ಕೇಳಿದ ಮೇಲೆ, "ಪ್ರತಿದಿನವೂ ನಿಮಗೆ ಯಾರು ಬಟ್ಟೆಯನ್ನು ಹವಣಿಸುವುದಕ್ಕೆ ಸಾಧ್ಯ? ನೀವು ಒಂದು ಕೆಲಸಮಾಡಿ. ಒಂದು ಬೆಕ್ಕನ್ನು ಸಾಕಿ. ಇದರಿಂದ ಇಲಿಗಳು ದೂರವಾಗುತ್ತವೆ" ಎಂದರು. ತಕ್ಷಣವೆ ಆ ಸಾಧು ಒಂದು ಬೆಕ್ಕಿನಮರಿಯನ್ನು ಆ ಹಳ್ಳಿಯಲ್ಲಿ ಹುಡುಕಿ ಗುಡಿಸಲಿಗೆ ತೆಗೆದುಕೊಂಡು ಹೋದನು. ಅಂದಿನಿಂದ ಇಲಿಗಳು ಇವನಿಗೆ ತೊಂದರೆ ಕೊಡುವುದನ್ನು ನಿಲ್ಲಿಸಿದುವು. ಸಾಧುವಿನ ಆನಂದಕ್ಕೆ ಪಾರವೇ ಇರಲಿಲ್ಲ. ಸಾಧು ಬಹಳ ಉಪಯೋಗವಾದ ಸಣ್ಣ ಬೆಕ್ಕಿನಮರಿಯನ್ನು ಪ್ರೀತಿಯಿಂದ ಕಾಣುತ್ತ ಹಳ್ಳಿಯಿಂದ ಭಿಕ್ಷೆಮಾಡಿ ತಂದ ಹಾಲಿನಿಂದ ಕಾಪಾಡತೊಡಗಿದನು. ಕೆಲವು ದಿನಗಳಾದ ಮೇಲೆ ಒಬ್ಬ ಹಳ್ಳಿಯವನು ಹೀಗೆಂದನು: "ಸಾಧುಜೀ, ನಿಮಗೆ ಹಾಲು ಪ್ರತಿದಿನವೂ ಬೇಕಾಗಿದೆ. ಭಿಕ್ಷೆ ಬೇಡಿ ಹೆಚ್ಚು ಅಂದರೆ ಸ್ವಲ್ಪ ಕಾಲ ನೀವು ಹಾಲನ್ನು ಪಡೆಯಬಹುದು. ವರುಷವೆಲ್ಲ ನಿಮಗೆ ಹಾಲನ್ನು ಯಾರು ಒದಗಿಸುವರು? ನೀವು ಒಂಧು ಕೆಲಸವನ್ನು ಮಾಡಿ. ಒಂದು ಹಸುವನ್ನು ಸಾಕಿಕೊಳ್ಳಿ. ಇದರಿಂದ ನಿಮಗೆ ಉಪಯೋಗಕ್ಕೆ ಬೇಕಾದಷ್ಟು ಹಾಲು ಸಿಕ್ಕುತ್ತದೆ, ಮತ್ತು ಬೆಕ್ಕಿಗೂ ಕೊಡಬಹುದು." ಸ್ವಲ್ಪ ದಿನಗಳಾದಮೇಲೆ ಸಾಧು ಒಂದು ಕರೆಯುವ ಹಸುವನ್ನು ಸಂಪಾದಿಸಿದನು. ಅಂದಿನಿಂದ ಹಾಲನ್ನು ಬೇಡುವ ಅವಶ್ಯಕತೆ ಇರಲಿಲ್ಲ. ಆದರೆ ಕ್ರಮೇಣ ಹಸುವಿಗಾಗಿ ಹುಲ್ಲನ್ನು ಬೇಡುವ ಅವಶ್ಯಕತೆ ಬಂದಿತು. ಇದಕ್ಕಾಗಿ ಹತ್ತಿರಿದ್ದ ಹಳ್ಳಿಯವರನ್ನು ನೋಡಬೇಕಾಯಿತು. ಹಳ್ಳಿ

ಯವರು, "ನಿಮ್ಮ ಗುಡಿಸಿಲಿನ ಹತ್ತಿರವೆ ಬೇಕಾದಷ್ಟು ಸಾಗುವಳಿ ಮಾಡದ ಭೂಮಿ ಇದೆ. ಅದನ್ನು ಉತ್ತಿ ಬಿತ್ತಿದರೆ ನಿಮ್ಮ ಹಸುವಿಗೆ ಹುಲ್ಲನ್ನು ಬೇಡುವ ಅವಶ್ಯಕತೆಯೇ ಇರುವುದಿಲ್ಲ." ಎಂದರು. ಇವರ ಬುದ್ಧಿವಾದದಂತೆ ಸಾಧು ನೆಲವನ್ನು ಉಳಲು ಪ್ರಾರಂಭಿಸಿದನು. ಕ್ರಮೇಣ ಕೆಲವು ಆಳುಗಳನ್ನು ನೇಮಿಸಿಕೊಳ್ಳಬೇಕಾಯಿತು. ಈಗ ಸಾಧು ಕೆಲಸದಲ್ಲಿ ನಿರತನಾದ ಒಬ್ಬ ಗೃಹಸ್ಥನಂತೆ ಕಾಲಕಳೆಯುತ್ತಿದ್ದನು. ಕೆಲವು ದಿನಗಳಾದಮೇಲೆ ಈತನ ಗುರು ನೋಡುವುದಕ್ಕೆ ಬಂದರು. ಬೇಸಾಯಕ್ಕೆ ಬೇಕಾದ ಎತ್ತು, ನೇಗಿಲು ಮುಂತಾದುವುಗಳನ್ನು ನೋಡಿ ಹತ್ತಿರಿದ್ದ ಆಳನ್ನು "ಇಲ್ಲಿ ಒಂದು ಪರ್ಣಶಾಲೆಯಲ್ಲಿ ಸಾಧು ಒಬ್ಬನು ವಾಸವಾಗಿದ್ದನು. ಈಗ ಈತನು ಎಲ್ಲಿಗೆ ಹೋಗಿರುವನು ಹೇಳು" ಎಂದರು. ಇದಕ್ಕೆ ಏನು ಉತ್ತರ ಕೊಡಬೇಕೋ ಆ ಆಳಿಗೆ ತಿಳಿಯಲಿಲ್ಲ. ಆಗ ಗುರು ಹತ್ತಿರಿದ್ದ ಮನೆಯನ್ನು ಪ್ರವೇಶಮಾಡಿದಾಗ ತನ್ನ ಶಿಷ್ಯನನ್ನು ಕಂಡನು. ಗುರು ಅವನನ್ನು ನೋಡಿ "ಮಗೂ, ಇದೆಲ್ಲ ಏನು ?" ಎಂದರು. ಶಿಷ್ಯನಿಗೆ ತುಂಬಾ ನಾಚಿಕೆಯಾಗಿ ಗುರುಗಳ ಕಾಲಮೇಲೆ ಬಿದ್ದು "ಗುರುದೇವ! ಇದೆಲ್ಲ ಒಂದು ಚೂರು ಕೌಪೀನಕ್ಕಾಗಿ" ಎಂದು ಎಲ್ಲವನ್ನೂ ವಿವರವಾಗಿ ವಿಸ್ತರಿಸಿದನು ಗುರುದರ್ಶನದಿಂದ ಪ್ರಪಂಚದ ಆಸಕ್ತಿಯೆಲ್ಲ ಇವನಿಂದ ದೂರವಾಯಿತು. ತನ್ನ ಮನೆ, ಧನ, ಮುಂತಾದವನ್ನೆಲ್ಲ ಬಿಟ್ಟು ಗುರುವಿನ ಹಿಂದೆ ಹೊರಟುಹೋದನು.

---

# ಸಾಧನಕ್ಕೆ ಬೇಕಾದ ಮನೋಭಾವ

೧. ಮೊದಲು ಏಕಾಂತ ಸ್ಥಳದಲ್ಲಿ ಮನಸ್ಸನ್ನು ಏಕಾಗ್ರಮಾಡುವುದಕ್ಕೆ ಪ್ರಯತ್ನಿಸಬೇಕು. ಇಲ್ಲದಿದ್ದರೆ ಮನಸ್ಸು ಹಲವು ವಿಷಯಗಳ ಮೇಲೆ ಚದುರಿಹೋಗುವುದು. ಹಾಲು ಮತ್ತು ನೀರನ್ನು ಒಟ್ಟಿಗೆ ಸೇರಿಸಿದರೆ ಅದು ಬೆರೆತುಹೋಗುವುದು ಖಂಡಿತ. ಆದರೆ ಹಾಲನ್ನು ಕಡೆದು ಬೆಣ್ಣೆಯನ್ನು ಮಾಡಿ ನೀರಿನಲ್ಲಿ ಹಾಕಿದರೆ ಕರಗದೆ ಅದು ಬೇರೆ

ಯಾಗಿ ತೇಲುತ್ತದೆ. ಹೀಗೆಯೇ ದೀರ್ಘಸಾಧನೆಯಿಂದ ಮನಸ್ಸನ್ನು ತನ್ನ ಸ್ವಾಧೀನಕ್ಕೆ ತಂದಿದ್ದರೆ ಅವನು ನಿರ್ಜನ ಪ್ರದೇಶದಲ್ಲಿರಲಿ ಅಥವಾ ಗಡಿಬಿಡಿಯಲ್ಲಿರಲಿ ದೇವರನ್ನು ಧ್ಯಾನಮಾಡಬಹುದು.

೨. ಏಕಾಗ್ರವಾದ ನಿಷ್ಠೆಯಿಲ್ಲದೆ ದೇವರನ್ನು ಯಾರೂ ಸಾಕ್ಷಾತ್ಕಾರ ಮಾಡಿಕೊಳ್ಳಲಾಗುವುದಿಲ್ಲ. ಹೇಗೆ ಗಂಡನಲ್ಲಿ ಪೂರ್ಣ ಭಕ್ತಿಯನ್ನು ಇಟ್ಟ ಸತಿ, ಪತಿಯ ಪ್ರೇಮವನ್ನು ಹೊಂದುವಳೋ ಹಾಗೆಯೆ ತನ್ನ ಇಷ್ಟ ದೇವತೆಯಲ್ಲಿ ಅಚಲ ಭಕ್ತಿಯನ್ನು ಇಟ್ಟಿರುವ ಭಕ್ತ ಭಗವಂತನ ಅನುಗ್ರಹವನ್ನು ಹೊಂದಿ ಅವನನ್ನು ಪಡೆಯುತ್ತಾನೆ.

೩. ಇಂದು ಯಾವ ದಿನವೆಂದು ಹನುಮಂತನನ್ನು ಕೇಳಿದಾಗ "ನನಗೆ ವಾರ ಗೊತ್ತಿಲ್ಲ, ನಕ್ಷತ್ರ ಗೊತ್ತಿಲ್ಲ, ನನಗೆ ಶ್ರೀ ರಾಮಚಂದ್ರನ ಪಾದಪದ್ಮಗಳೊಂದೆ ಗೊತ್ತಿರುವುದು" ಎಂದನು.

೪. ಮನಸ್ಸು, ಕಾಡು, ನಿರ್ಜನ ಪ್ರದೇಶ ಇವು ಮೂರು ಧ್ಯಾನಕ್ಕೆ ಯೋಗ್ಯವಾದ ಸ್ಥಳಗಳು.

೫. ವಿಶ್ರಾಂತಿ ಮತ್ತು ಏಕಾಂತವಿಲ್ಲದೆ ನೀನು ಉತ್ಕಟರೋಗ ದಿಂದ ಹೇಗೆ ಗುಣಮುಖವಾಗಬಲ್ಲೆ ? ಪ್ರಪಂಚದಲ್ಲಿರುವವನು ಸನ್ನಿಪಾತ ಜ್ವರದಿಂದ ನರಳುತ್ತಿರುವಂತೆ. ಅವನ ಕೋಣೆಯಲ್ಲಿ ಒಂದು ದೊಡ್ಡ ನೀರಿನ ಗಡಿಗೆ ಮತ್ತು ಉಪ್ಪಿನಕಾಯಿಯ ಜಾಡಿಯನ್ನು ನೀವು ಇಟ್ಟಂತಿದೆ. ಕಾಮ ಉಪ್ಪಿನ ಕಾಯಿಯಂತೆ. ಪ್ರಾಪಂಚಿಕ ವಿಷಯ ಗಳನ್ನು ಅನುಭವಿಸಬೇಕೆಂಬುದು ನೀರಿನ ಗಡಿಗೆಯಂತೆ. ಇಂತಹ ಸಂದರ್ಭದಲ್ಲಿ ನೀವು ರೋಗದಿಂದ ಹೇಗೆ ಪಾರಾಗಬಲ್ಲಿರಿ ? ಕೆಲವುಕಾಲ ನಿರ್ಜನ ಪ್ರದೇಶಕ್ಕೆ ಹೋಗಿ ಅಲ್ಲಿ ಸಾಧನೆಯಲ್ಲಿ ನಿರತರಾಗಿರಬೇಕು. ಮೇಲಿನ ಚಿಕಿತ್ಸೆಯಿಂದ ಒಬ್ಬನು ಸಂಪೂರ್ಣ ಗುಣಮುಖನಾದಮೇಲೆ ಮನೆಗೆ ಹಿಂತಿರುಗಿ ಬಂದರೆ ಏನೂ ಅಂಜಿಕೆ ಇಲ್ಲ.

೬. ಒಬ್ಬನು ಆಧ್ಯಾತ್ಮಿಕ ಜೀವನದ ಮೊದಲಿನಲ್ಲಿ ನಿರ್ಜನ ಪ್ರದೇಶಕ್ಕೆ ಹೋಗಿ ಅಲ್ಲಿ ದೇವರನ್ನು ಧ್ಯಾನಿಸುವುದಕ್ಕೆ ಪ್ರಯತ್ನಿಸಬೇಕು. ನಿರಂತರ ಅಭ್ಯಾಸದಿಂದ ಮನಸ್ಸು ನಮ್ಮ ಸ್ವಾಧೀನವಾದ ಮೇಲೆ ನಮಗೆ ಇಚ್ಛೆಬಂದ ಕಡೆಯಲ್ಲಿ ಧ್ಯಾನಮಾಡಬಹುದು. ಸಣ್ಣ ಸಸಿಯನ್ನು

ಜೋಪಾನವಾಗಿ ಬೇಲಿಹಾಕಿ ಕಾಪಾಡಬೇಕು. ಇಲ್ಲದಿದ್ದರೆ ಕುರಿ ಮತ್ತು ದನಗಳು ಅದನ್ನು ತಿಂದುಬಿಡುವುವು. ಆದರೆ ಅದೇ ಸಸಿ ದೊಡ್ಡ ಮರವಾಗಿ ರೆಂಬೆಕೊಂಬೆಗಳಿಂದ ಕೂಡಿದಮೇಲೆ ಅದಕ್ಕೆ ಕಟ್ಟಿದ ಕುರಿಯಾಗಲೀ ದನವಾಗಲೀ ಮರವನ್ನು ಏನೂ ಮಾಡಲಾರದು.

೭. ಯುವಕ ಶಿಷ್ಯನೊಬ್ಬನು ಶ್ರೀರಾಮಕೃಷ್ಣರನ್ನು, "ಸ್ವಾಮಿ, ಕಾಮವನ್ನು ಹೇಗೆ ಗೆಲ್ಲುವುದು" ಎಂದು ಪ್ರಶ್ನಿಸಿದನು. ಅದಕ್ಕೆ ಶ್ರೀರಾಮಕೃಷ್ಣರು ನಗುತ್ತ ಹೀಗೆ ಹೇಳಿದರು: "ಎಲ್ಲಾ ಸ್ತ್ರೀಯರನ್ನೂ ನಿನ್ನ ತಾಯಿಯಂತೆ ಕಾಣು. ಸ್ತ್ರೀಯರ ಮುಖವನ್ನು ನೋಡಬೇಡ. ಅಕೆಯ ಕಾಲುಗಳನ್ನು ನೋಡು. ಆಗ ಕೆಟ್ಟ ಆಲೋಚನೆಗಳೆಲ್ಲ ಪಲಾಯನವಾಡುವುವು.

೮. ಪ್ರತಿಯೊಬ್ಬನಿಗೂ ಸಹನಗುಣವು ಅತ್ಯಂತ ಅವಶ್ಯಕ. ಯಾರಿಗೆ ಈ ಗುಣವಿದೆಯೊ ಅವನು ಮಾತ್ರ ನಾಶವಾಗುವುದಿಲ್ಲ. (ಬಂಗಾಳಿ ಲಿಪಿಯಲ್ಲಿ) 'ಶ' ಅಲ್ಲದೆ ಮೂರು ಬೇರೆ ರೂಪಗಳಲ್ಲಿ ಮತ್ಯಾವ ಅಕ್ಷರವೂ ಬರುವುದಿಲ್ಲ. ಸ, ಶ, ಷ—ಎಲ್ಲಕ್ಕೂ 'ಸಹನೆ' ಯೆಂದು ಅರ್ಥ.

೯. ಸಹನಗುಣಕ್ಕಿಂತ ಮೇಲಾದುದಿಲ್ಲ ಅದನ್ನು ಎಲ್ಲರೂ ಅಭ್ಯಾಸಮಾಡಬೇಕು. ಭಾರವಾದ ಸುತ್ತಿಗೆಯಿಂದ ಎಷ್ಟು ಪೆಟ್ಟು ಕೊಟ್ಟರೂ ಅಕ್ಕಸಾಲೆಯ ಅಡಿಗಲ್ಲು ಅಚಲವಾಗಿ ನಿಂತಿರುವುದು. ಇದರಂತೆಯೇ ಪ್ರತಿಯೊಬ್ಬರೂ ಯಾರು ಏನೇ ಮಾಡಲಿ ಅಥವಾ ಹೇಳಲಿ ಸ್ಥಿರಚಿತ್ತನಿಂದ ಅನುಭವಿಸಬೇಕು.

೧೦. ಕೊಳದ ನೀರಿಗೆ ರುಚಿಕರವಾದ ಗಾಳದ ಹುಳುಗಳನ್ನು ಎರಚಿದರೆ ಮೀನುಗಳು ನಾನಾ ಕಡೆಯಿಂದ ಬರುವುವು. ಭಕ್ತನ ಶ್ರದ್ಧೆಯೂ ಕೂಡ ದೇವರ ವಿಚಾರದಲ್ಲಿ ಹೀಗೆ ಕೆಲಸಮಾಡುವುದು. ಶ್ರದ್ಧೆಗೆ ಮೆಚ್ಚಿ ದೇವರು ಭಕ್ತನಲ್ಲಿಗೆ ಬೇಗ ಬಂದು ಕಾಣಿಸಿಕೊಳ್ಳುವನು.

೧೧. ಮಳೆಗಾಲದಲ್ಲಿ ಪತಂಗ ಬೆಂಕಿಯ ಕಡೆಗೆ ಹಾರಿ ಸಾಯುವುದೇ ಹೊರತು ಕತ್ತಲೆಯ ಕಡೆಗೆ ತಿರುಗುವುದಿಲ್ಲ. ಇದರಂತೆಯೇ ಎಲ್ಲಿ ಸಾಧು ಪುರುಷರು ವಾಸಿಸುತ್ತಾರೆಯೋ, ದೇವರ ವಿಚಾರವಾಗಿ ಮಾತ

ನಾಡುತ್ತಾರೆಯೋ, ಭಕ್ತನು ಅಲ್ಲಿಗೆ ಹೋಗುವನು. ಕೆಲಸಕ್ಕೆ ಬಾರದ ಪ್ರಾಪಂಚಿಕ ವಸ್ತುಗಳಿಂದ ದೂರದಲ್ಲಿದ್ದು ಭಗವಂತನ ಧ್ಯಾನದಲ್ಲಿ ಅವನು ಕಾಲವನ್ನು ಕಳೆಯುವನು.

೧೨. ಒಮ್ಮೆ ಪಾರ್ವತಿ ಮಹಾದೇವನನ್ನು ಕುರಿತು "ಹೇ ಪ್ರಭೂ! ಭಗವಂತನ ಜ್ಞಾನಕ್ಕೆ ದಾರಿ ಯಾವುದು?" ಎಂದು ಕೇಳಿದಳು. ಮಹಾದೇವನು "ಶ್ರದ್ಧೆಯೊಂದೇ ಹಾದಿ" ಎಂದನು. ನಿನ್ನ ಗುರುವಿನಲ್ಲಿ ಅಚಲವಾದ, ಸಂಪೂರ್ಣವಾದ ಶ್ರದ್ಧೆಯಿಲ್ಲದೆ ನೀನು ದೇವರನ್ನು ತಿಳಿಯಲಾರೆ.

೧೩. ಮನುಷ್ಯನಾಗಿ ಹುಟ್ಟುವ ಸುಯೋಗವನ್ನು ಪಡೆದು, ದೇವರನ್ನು ಈ ಜನ್ಮದಲ್ಲಿ ತಿಳಿಯಲಾರದವನ ಬಾಳು ವ್ಯರ್ಥ.

೧೪. ಪ್ರಾಪಂಚಿಕನ ಮನಸ್ಸು ಸ್ಪ್ರಿಂಗ್ ಇರುವ ಮೆತ್ತೆಯಂತೆ. ಎಲ್ಲಿಯವರೆಗೆ ನೀವು ಅದರಮೇಲೆ ಕುಳಿತುಕೊಳ್ಳುತ್ತೀರೋ ಅಲ್ಲಿಯವರೆಗೆ ಅದು ಅಮುಕಿ ಇರುತ್ತದೆ. ಮೇಲೆದ್ದರೆ ಮೆಲ್ಲಗೆ ಉಬ್ಬುವುದು. ಇದ ರಂತೆಯೇ ಉತ್ತಮ ಪುರುಷನ ಸಂಗದಲ್ಲಿರುವಾಗ ಏಳುವ ಒಳ್ಳೆಯ ಆಲೋಚನೆ ಅವರ ಸಂಗವನ್ನು ಬಿಟ್ಟ ತಕ್ಷಣವೇ ಮಾಯವಾಗುತ್ತದೆ. ಹಿಂದಿನಂತೆಯೇ ಮನಸ್ಸು ಮಲಿನವಾಗುವುದು.

೧೫. ಒಮ್ಮೆ ಅವನ ಪವಿತ್ರನಾಮದ ಶಕ್ತಿಯಲ್ಲಿ ನಂಬಿಕೆ ಹುಟ್ಟಿ ಅದನ್ನು ಪದೇ ಪದೇ ಉಚ್ಚರಿಸುವುದಕ್ಕೆ ಮನಸ್ಸಾದಮೇಲೆ, ಭಕ್ತಿ, ವಿವೇಕ ಸಾಧನೆಗಳಾವುವೂ ಆವಶ್ಯಕವಿಲ್ಲ. ಸಂಶಯ ಮಾಯವಾಗು ವುದು. ಮನಸ್ಸು ಪವಿತ್ರವಾಗುವುದು. ಅವನ ನಾಮದ ಬಲದಿಂದ ದೇವರನ್ನೇ ಹೊಂದುವನು.

೧೬. ಶಿಶುಸಹಜವಾದ ಸರಳತೆ ಮತ್ತು ಶ್ರದ್ಧೆಯಿಂದ ಭಗವಂತ ನನ್ನು ಪಡೆಯಬೇಕು. ಒಬ್ಬ ಸಾಧುವನ್ನು ಕಂಡು ತನಗೆ ಉಪದೇಶ ಕೊಡಬೇಕೆಂದು ಕೇಳಿಕೊಂಡನು. ಹೃತ್ಪೂರ್ವಕವಾಗಿ ನೀನು ದೇವರನ್ನು ಪ್ರೀತಿಸು ಎನ್ನುವುದೇ ಸಾಧುವಿನ ಉಪದೇಶವಾಗಿತ್ತು. ಪ್ರಶ್ನಿಸುವವನು "ನಾನು ದೇವರನ್ನು ನೋಡಿಲ್ಲ, ಅವನ ವಿಚಾರವಾಗಿ ಏನೂ ಗೊತ್ತಿಲ್ಲ. ನಾನು ಅವನನ್ನು ಪ್ರೀತಿಸುವುದು ಹೇಗೆ ಸಾಧ್ಯ?" ಎಂದು ಕೇಳಿದನು.

ಸಾಧು, ನೀನು ಯಾರನ್ನು ಪ್ರೀತಿಸುವೆ ಎಂದು ಕೇಳಿದನು. "ಪ್ರೀತಿಸುವುದಕ್ಕೆ ನನಗೆ ಯಾವುದೂ ಇಲ್ಲ. ಒಂದು ಕುರಿ ಇದೆ. ಅದೊಂದನ್ನೇ ನಾನು ಪ್ರೀತಿಸುವುದು" ಎಂದನು. ಅದಕ್ಕೆ ಸಾಧು "ಹಾಗಾದರೆ ಅದನ್ನೇ ಸಾಕು, ಹೃತ್ಪೂರ್ವಕವಾಗಿ ನೀನು ಅದನ್ನು ಪ್ರೀತಿಸು. ದೇವರು ಅಲ್ಲಿ ಇರುವನು ಎಂದು ಯಾವಾಗಲೂ ನೆನಪಿನಲ್ಲಿಡು" ಎಂದನು. ಈ ಬುದ್ಧಿವಾದವನ್ನು ಕೊಟ್ಟಾದ ಮೇಲೆ ಸಾಧು ಹೊರಟು ಹೋದನು. ಪ್ರಶ್ನಿಸಿದವನು ದೇವರು ಆ ಪ್ರಾಣಿಯಲ್ಲಿರುವನು ಎಂದು ಸಂಪೂರ್ಣವಾಗಿ ನಂಬಿ ಅದನ್ನು ಸಾಕಲು ಮೊದಲು ಮಾಡಿದನು. ಕೆಲವು ದಿನಗಳಾದ ಮೇಲೆ ಸಾಧು ಹಿಂತಿರುಗಿ ಬರುವಾಗ ತಾನು ಬುದ್ಧಿವಾದವನ್ನು ಕೊಟ್ಟ ಮನುಷ್ಯನನ್ನು ಹುಡುಕಿ ಅವನು ತನ್ನ ಸಾಧನೆಯಲ್ಲಿ ಹೇಗೆ ಮುಂದುವರಿಯುತ್ತಿರುವನು ಎಂದು ಕೇಳಿದನು. ಈತನು ಸಾಧುವಿಗೆ ನಮಸ್ಕಾರ ಮಾಡಿ "ಸ್ವಾಮಿ, ನಾನು ಸರಿಯಾಗಿರುವೆನು. ನಿಮ್ಮ ಬುದ್ಧಿವಾದಕ್ಕೆ ಅನೇಕ ಧನ್ಯವಾದ. ನೀವು ತೋರಿಸಿ ಕೊಟ್ಟ ದಾರಿಯಲ್ಲಿ ಬಹಳ ಒಳ್ಳೆಯದಾಗಿದೆ. ಅನೇಕ ವೇಳೆ ಕುರಿಯಲ್ಲಿ ಸುಂದರವಾದ ಚತುರ್ಭುಜದ ಮೂರ್ತಿಯನ್ನು ನೋಡಿ ಅತ್ಯಾನಂದ ಪಡುತ್ತೇನೆ" ಎಂದನು.

೧೭. ಸಾಧುಗಳ ಸಂಗ ಅಕ್ಕಿಯನ್ನು ತೊಳೆದ ನೀರಿನಂತೆ. ಇದನ್ನು ಕುಡಿದರೆ ಹೆಂಡದ ಅಮಲು ಇಳಿಯುವ ಹಾಗೆ ಆಸೆ ಎಂಬ ಸುರಾಪಾನದಿಂದ ಉಂಟಾದ ಅಮಲು, ಇವರ ಸಂಗದಿಂದ ಇಳಿಯುವುದು.

೧೮. ಶ್ರೀರಾಮಕೃಷ್ಣರು ಸಾಧುಗಳನ್ನು ಹಾವಿಗೆ ಹೋಲಿಸುತ್ತಿದ್ದರು. ಹಾವು ತಮಗಾಗಿ ಬಿಲವನ್ನು ಮಾಡದೆ, ಇಲಿಗಳು ಮಾಡಿದ ಬಿಲದಲ್ಲಿ ವಾಸಿಸುವಂತೆ, ಸಾಧು ತನಗಾಗಿ ಮನೆಯನ್ನು ಕಟ್ಟಿಕೊಳ್ಳುವುದಿಲ್ಲ. ಆವಶ್ಯಕ ಬಂದಾಗ ಮತ್ತೊಬ್ಬರ ಮನೆಯಲ್ಲಿ ವಾಸಿಸುತ್ತಾನೆ.

೧೯. ಒಬ್ಬನು ವಕೀಲನನ್ನು ನೋಡಿದಾಗ ವ್ಯಾಜ್ಯ ಮತ್ತು ಕೋರ್ಟುಗಳನ್ನು ನೆನೆಯುವಂತೆ, ವೈದ್ಯನನ್ನು ನೋಡಿದಾಗ ರೋಗ ಮತ್ತು ಔಷಧಿಗಳನ್ನು ನೆನೆಯುವಂತೆ, ಭಕ್ತನನ್ನು ನೋಡಿದಾಗ ತನ್ನ ಇಷ್ಟದೇವರನ್ನು ಮತ್ತು ಪರಕಾಲವನ್ನು ಯೋಚಿಸುವನು.

---

# ಮರಳಿ ಯತ್ನವ ಮಾಡು

೧. ಸಮುದ್ರದಲ್ಲಿ ಒಮ್ಮೆ ಮುಳುಗಿದಾಗ ಮುತ್ತು ಸಿಕ್ಕದೇ ಇದ್ದರೆ ಸಮುದ್ರದಲ್ಲಿ ಮುತ್ತೇ ಇಲ್ಲವೆಂದು ತಿಳಿಯಬೇಡ. ಸಮುದ್ರದಲ್ಲಿ ಲೆಕ್ಕವಿಲ್ಲದಷ್ಟು ಮುತ್ತುಗಳು ಹುದುಗಿವೆ. ಸ್ವಲ್ಪ ಸಾಧನೆಯನ್ನು ಮಾಡಿದಮೇಲೆ ದೇವರನ್ನು ಕಾಣದೆ ಇದ್ದರೆ ಎದೆಗೆಡಬೇಡ. ಸಮಾಧಾನ ದಿಂದ ಸಾಧನೆಯನ್ನು ಮಾಡು. ಸಕಾಲದಲ್ಲಿ ದೇವರ ಅನುಗ್ರಹ ನಿನಗೆ ದೊರಕುವುದರಲ್ಲಿ ಸಂದೇಹವಿಲ್ಲ.

೨. ಒಂದು ವಿಧದ ಮುತ್ತಿನ ಚಿಪ್ಪಿನ ಹುಳು ಸಮುದ್ರದ ಮೇಲೆ ಚಿಪ್ಪನ್ನು ತೆರೆದು ಅತಿ ವಿಚಿತ್ರವಾದ ಸ್ವಾತೀ ಮಳೆಯ ಒಂದು ಹನಿಯನ್ನು ಹಿಡಿಯಲು ತೇಲುತ್ತಿರುತ್ತದೆ. ಅದು ಬಿದ್ದ ತಕ್ಷಣವೆ ಮುಚ್ಚಿ ಸಮುದ್ರದ ತಳಕ್ಕೆ ಹೋಗುವುದು. ಪುನಃ ಬರುವುದಿಲ್ಲ. ಇದರಂತೆಯೆ ಶ್ರದ್ಧಾವಂತನಾದ ಸಾಧಕ ತನ್ನ ಗುರುವಿನಿಂದ ಮಂತ್ರೋಪದೇಶವನ್ನು ಪಡೆದಮೇಲೆ ಪ್ರಪಂಚದ ಕಡೆಗೆ ಸ್ವಲ್ಪವೂ ಗಮನ ಕೊಡದೆ ಭಕ್ತಿಸಾಗರದ ಅನಂತ ಆಳದಲ್ಲಿ ಮುಳುಗುವನು.

೩. ಒಬ್ಬ ಐಶ್ವರ್ಯವಂತನನ್ನು ನಾವು ನೋಡಬೇಕಾದರೆ ಬಾಗಿಲಿನಲ್ಲಿರುವ ಪಹರೆಯವನನ್ನು ಒಳ್ಳೆಯವನನ್ನಾಗಿ ಮಾಡಿಕೊಳ್ಳ ಬೇಕಾಗುವಂತೆ, ದೇವರನ್ನು ಸೇರಬೇಕಾದರೆ ಸಾಧುಸಂಗ ಮತ್ತು ಇನ್ನೂ ಹಲವು ವಿಧದ ಸಾಧನೆಗಳನ್ನು ಮಾಡಬೇಕು.

೪. ಸೌದೆ ಒಡೆಯುವವನು ಒಬ್ಬನು ತಾನು ಕಾಡಿನಿಂದ ತಂದ ಸೌದೆಯನ್ನು ಮಾರಿ ಬಹಳ ಕಷ್ಟದಿಂದ ಜೀವನವನ್ನು ಸಾಗಿಸುತ್ತಿದ್ದನು. ಒಂದು ದಿನ ಅವನು ಸಣ್ಣ ಪುಳ್ಳೆಯ ಹೊರೆಯನ್ನು ತರುತ್ತಿದ್ದಾಗ, ಒಬ್ಬನು ಅವನನ್ನು ಇನ್ನೂ ಮುಂದೆ ಹೋಗು ಎಂದನು. ಇವನ ಬುದ್ಧಿವಾದವನ್ನು ಅನುಸರಿಸಿ ಕಾಡಿನಲ್ಲಿ ಇನ್ನೂ ಮುಂದೆ ಹೋದನು. ಅಲ್ಲಿ ಹೆಚ್ಚು ಪ್ರತಿಫಲ ಸಿಕ್ಕಿತು. ಆ ಭಾಗದಲ್ಲಿ ದೊಡ್ಡ ದೊಡ್ಡ ಮರ ಗಳಿದ್ದುವು. ತನ್ನ ಶಕ್ತಿಗೆ ಸಾಧ್ಯವಾದಷ್ಟು ದೊಡ್ಡ ದೊಡ್ಡ ಕೊಂಬೆ ಗಳನ್ನು ಕಡಿದು ಅವುಗಳನ್ನು ಮಾರಿ ಎಂದಿಗಿಂತ ಹೆಚ್ಚು ಲಾಭವನ್ನು

ಪಡೆದನು. ಇನ್ನೂ ಮುಂದೆ ಹೋಗು ಎಂದು ಅವನು ಬುದ್ಧಿ ಹೇಳಿರುವನು, ನಾನೇಕೆ ಮುಂದೆ ಹೋಗಬಾರದು? ಎಂದು ಅವನು ಆಲೋಚಿಸಿದನು ಅವನು ಆಲೋಚಿಸಿದಂತೆ ಅಂದು ಮಾಡಿದನು. ಕಾಡಿನಲ್ಲಿ ಗಂಧದ ಮರಗಳು ಇದ್ದ ಭಾಗವನ್ನು ಅವನು ಕಂಡನು. ತನಗೆ ಹೊರಲು ಸಾಧ್ಯವಾದಷ್ಟು ಗಂಧದ ಮರವನ್ನು ಹೊತ್ತುಕೊಂಡು ಹೋಗಿ ಪೇಟೆಯಲ್ಲಿ ಮಾರಿ ಹೆಚ್ಚು ಲಾಭವನ್ನು ಪಡೆದನು ಮಾರನೆ ದಿನ ಆ ಅಪರಿಚಿತನ ಬುದ್ಧಿವಾದವನ್ನು ಮತ್ತೊಮ್ಮೆ ಜ್ಞಾಪಿಸಿಕೊಂಡು ಇನ್ನೂ ಮುಂದೆ ಹೋಗಲು ಮನಸ್ಸು ಮಾಡಿದನು. ಅಂದಿನ ದಿನ ಅವನು ತಾಮ್ರದ ಗಣಿಗೆ ಬಂದನು. ಇದು ಅವನು ಮುಂದುವರಿಯುವುದನ್ನು ತಡೆಯಲಿಲ್ಲ. ದಿನದಿನವೂ ಅವನು ಮುಂದೆ ಮುಂದೆ ನಡೆದಂತೆಲ್ಲ ಬೆಳ್ಳಿ, ಚಿನ್ನ, ವಜ್ರದ ಗಣಿಗಳು ಸಿಕ್ಕಿ ಅವನು ಬಹಳ ಐಶ್ವರ್ಯವಂತನಾದನು. ಆಧ್ಯಾತ್ಮಿಕ ದಾರಿಯಲ್ಲಿಯೂ ಕೂಡ ಇದೇ ರೀತಿ. ಒಬ್ಬನು ಯಾವಾಗಲೂ ಮುಂದೆ ಮುಂದೆ ಹೋಗುತ್ತಿರಬೇಕು. ದೇವರ ಕೆಲವು ದೃಶ್ಯಗಳನ್ನು ಕಂಡಾಗ, ಅಥವಾ ಕೆಲವು ಮಾನಸಿಕ ಸಿದ್ಧಿಗಳನ್ನೂ ಪಡೆದಾಗ ನಾನು ಆಗಲೆ ಎಲ್ಲವನ್ನೂ ಹೊಂದಿರುವೆನು ಎಂದು ತಿಳಿಯಕೂಡದು.

೫. ಒಬ್ಬ ಮನುಷ್ಯನಿಗೆ ಯಾವುದೋ ಕಟ್ಟೆಯಲ್ಲಿ ದೊಡ್ಡ ದೊಡ್ಡ ಮೀನುಗಳಿವೆ ಎಂದು ತಿಳಿದರೆ ಅವನು ಏನು ಮಾಡಬೇಕು? ಮೊದಲು ಯಾರು ಅಲ್ಲಿ ಮೀನನ್ನು ಹಿಡಿದರೋ ಅವರನ್ನು ಆ ಸುದ್ದಿ ನಿಜವೆ ಎಂದು ಕೇಳಿ, ಅನಂತರ ಯಾವುದು ಉತ್ತಮವಾದ ಗಾಳಕ್ಕೆ ಹಾಕುವ ಹುಳ ಎಂಬುದನ್ನೆಲ್ಲ ವಿಚಾರಿಸಲು ಮೊದಲುಮಾಡಿದರೆ ಅವನು ಮೀನನ್ನು ಹಿಡಿಯುವುದೇ ಇಲ್ಲ. ಅವನು ಮಾಡಬೇಕಾದುದೇನೆಂದರೆ, ಕಟ್ಟೆಗೆ ಹೋಗಿ ಗಾಳವನ್ನು ಹಾಕಿ ಸಾವಧಾನದಿಂದ ಕಾಯಬೇಕು. ಮೊದಲು ಗಾಳಕ್ಕೆ ಸಿಕ್ಕಿಸಿದ ಹುಳುವನ್ನು ಮೀನುಗಳು ಮುಟ್ಟುವಂತೆ ತೋರುತ್ತದೆ. ಸ್ವಲ್ಪ ಹೊತ್ತಿನಲ್ಲೆ ದೊಡ್ಡದೊಂದು ಮೀನು ಗಾಳವನ್ನು ನುಂಗುತ್ತದೆ. ಮಹಾಪುರುಷರು ಮತ್ತು ಭಕ್ತರು ಹೇಳುವುದರಲ್ಲಿ ಒಬ್ಬ ಸಂಪೂರ್ಣ ಶ್ರದ್ಧೆ ಇಡಬೇಕು. ಭಕ್ತಿಯ ಗಾಳವನ್ನು ಒಡ್ಡಿದ ಮೇಲೆ, ಒಬ್ಬನು ಗಾಳದ ಕೋಲು ಮತ್ತು ದಾರದೊಂದಿಗೆ ಸಾವಧಾನದಿಂದ ಕಾಯಬೇಕು.

೬. ಒಬ್ಬನು ಶ್ರೀರಾಮಕೃಷ್ಣರನ್ನು ಕುರಿತು "ಸ್ವಾಮಿ, ನಾನು ಎಷ್ಟೋ ಸಾಧನೆಯನ್ನು ಮಾಡಿರುವೆನು. ಆದರೆ ಎಲ್ಲವೂ ಮೊದಲಿನಂತೆಯೇ ಮಬ್ಬಾಗಿದೆ. ನನ್ನಂತಹ ಜನರಿಗೆ ಏನೂ ಪ್ರಯೋಜನವಿಲ್ಲ" ಎಂದನು. ಶ್ರೀರಾಮಕೃಷ್ಣರು ಸ್ವಲ್ಪ ನಕ್ಕು ಹೀಗೆಂದರು—"ನೋಡು, ವಂಶಪಾರಂಪರ್ಯವಾಗಿ ಆರಂಭ ಮಾಡುವ ಬೇಸಾಯಗಾರ ಮಳೆ ಒಂದೇ ಸಮನಾಗಿ ಹನ್ನೆರಡು ವರ್ಷ ಬರದೇ ಇದ್ದರೂ ಅವನು ಆರಂಭವನ್ನು ಬಿಡುವುದಿಲ್ಲ. ಆದರೆ ಯಾರು ಆ ಗುಂಪಿಗೆ ಸೇರದೆ, ಬೇಕಾದಷ್ಟು ಲಾಭವನ್ನು ಸಂಪಾದಿಸಬೇಕೆಂದು ಬೇಸಾಯವನ್ನು ಮಾಡುವರೊ ಅವರು ಒಂದು ವರ್ಷ ಮಳೆ ಇಲ್ಲದೆ ಇದ್ದರೆ ನಿರಾಶರಾಗುವರು. ನಿಜವಾದ ಶ್ರದ್ಧಾವಂತನು ತಾನು ಬದುಕಿರುವತನಕ ಭಕ್ತಿಯಲ್ಲಿ ಕಳೆದರೂ ದೇವರನ್ನು ಕಾಣದೆ ಇದ್ದರೆ, ಭಗವಂತನ ಹೆಸರನ್ನು ಉಚ್ಚಾರಣೆ ಮಾಡುವುದನ್ನಾಗಲೀ ಅಥವಾ ಕೊಂಡಾಡುವುದನ್ನಾಗಲೀ ಬಿಡುವುದಿಲ್ಲ.

೭. ಈಜು ಕಲಿತುಕೊಳ್ಳುವುದಕ್ಕೆ ಮುಂಚೆ ನೀರಿನಲ್ಲಿ ಬಹಳ ಒದ್ದಾಡಬೇಕು. ಇದರಂತೆಯೆ ಸಚ್ಚಿದಾನಂದ ಸಾಗರದಲ್ಲಿ ಈಜು ಕಲಿಯಬೇಕಾದರೆ ನೀನು ಬಹಳ ಕಷ್ಟಪಡಬೇಕು.

---

# ದೇವರಿಗಾಗಿ ವ್ಯಾಕುಲತೆ

೧. ಒಬ್ಬ ದೇವರನ್ನು ಹೇಗೆ ಪ್ರೀತಿಸಬೇಕು? ಒಬ್ಬನ ಪ್ರೇಮ ಈ ಮೂರು ಪ್ರೇಮಾಸಕ್ತಿಯನ್ನು ಒಟ್ಟುಗೂಡಿಸಿದಷ್ಟು ಬಲವಾಗಿದ್ದರೆ, ಅಂದರೆ ಪ್ರಾಪಂಚಿಕನಲ್ಲಿರುವ ವಿಷಯಾಸಕ್ತಿ, ಲೋಭಿಗೆ ತನ್ನ ಹಣದ ಮೇಲಿರುವ ಆಸಕ್ತಿ, ಪತಿವ್ರತಾ ಹೆಂಗಸಿಗೆ ತನ್ನ ಪತಿಯ ಮೇಲೆ ಇರುವ ಪ್ರೀತಿ, ಹೀಗೆ ಇದ್ದರೆ ಒಬ್ಬನು ದೇವರನ್ನು ನೋಡುವುದರಲ್ಲಿ ಸಂದೇಹವಿಲ್ಲ.

೨. ತಾಯಿಗೆ ಹಲವು ಮಕ್ಕಳಿವೆ. ಒಂದಕ್ಕೆ ಆಡಲು ಗೊಂಬೆ

ಯನ್ನು ಕೊಟ್ಟಿರುವಳು, ಮತ್ತೊಂದಕ್ಕೆ ಆಟದ ಸಾಮಾನು, ಇನ್ನೊಂದಕ್ಕೆ ಮಿಠಾಯಿ, ಇವುಗಳನ್ನು ಕೊಟ್ಟಿರುವಳು. ಮಕ್ಕಳು ಇವುಗಳಲ್ಲಿ ನಿರತ ರಾಗಿ ತಾಯಿಯನ್ನು ಮರೆಯುವುವು. ಅವರಲ್ಲಿ ಯಾರು ತಮ್ಮ ಆಟದ ಸಾಮಾನನ್ನು ಆಚೆಗೆ ಎಸೆದು ಎಲ್ಲಿ ನನ್ನ ತಾಯಿ ಎಂದು ಅಳುವರೋ ಅವರ ಬಳಿಗೆ ತಾಯಿ ಬರುವಳು. ಮಗುವಿನ ಬಳಿಗೆ ಓಡಿಬಂದು ಅದನ್ನು ಎತ್ತಿಕೊಂಡು ಸಮಾಧಾನ ಮಾಡುವಳು. ಇದರಂತೆಯೇ, ಎಲೆ ಮಾನವನೇ ನೀನು ಕಾಮಕಾಂಚನದ ಆಸೆಯಲ್ಲಿ ಮುಳುಗಿರುವೆ. ಇವು ಗಳನ್ನು ಆಚೆಗೆ ಬಿಸುಟು ಜಗನ್ಮಾಯಿಗಾಗಿ ಅತ್ತರೆ ಅವಳು ಬಂದು ನಿನ್ನನ್ನು ಕೈಗಳಿಂದ ಅಪ್ಪಿಕೊಳ್ಳುವಳು.

೩. ಮಕ್ಕಳಾಗಲಿಲ್ಲ, ಅಥವಾ ತಮಗೆ ಆಸ್ತಿ ಬರಲಿಲ್ಲವೆಂದು ಜನರು ಕಣ್ಣೀರಿನ ಕೋಡಿಯನ್ನು ಸುರಿಸುತ್ತಾರೆ ದೇವರನ್ನು ನೋಡು ವುದಕ್ಕೆ ಆಗಲಿಲ್ಲ ಅಥವಾ ಅವನನ್ನು ಪ್ರೀತಿಸುವುದಕ್ಕೆ ಸಾಕಾದಷ್ಟು ಭಕ್ತಿ ಇಲ್ಲವೆಂದು ಯಾರು ಒಂದು ತೊಟ್ಟಾದರೂ ನೀರನ್ನು ಸುರಿಸು ತ್ತಾರೆ ?

೪. ಸಮುದ್ರದ ತೀರದಲ್ಲಿ ಒಂದು ದಿನ ಕ್ರೈಸ್ತನು ಸಂಚರಿಸು ತ್ತಿದ್ದಾಗ ಶಿಷ್ಯನೊಬ್ಬನು ಬಂದು ದೇವರನ್ನು ಪಡೆಯುವುದು ಹೇಗೆ ಎಂದು ಪ್ರಶ್ನೆಮಾಡಿದನು. ಕ್ರೈಸ್ತನು ಪ್ರಶ್ನಿಸುವವನೊಂದಿಗೆ ನೀರಿನಲ್ಲಿ ಇಳಿದು ತಕ್ಷಣ ಆವನನ್ನು ನೀರಿನಲ್ಲಿ ಅದುಮಿದನು. ಕೆಲವು ಕ್ಷಣಗಳಾದ ಮೇಲೆ ಅವನನ್ನು ಬಿಟ್ಟು ನೀರಿನಿಂದ ಮೇಲೆ ಎತ್ತಿ, ನೀರಿನಲ್ಲಿದ್ದಾಗ ಹೇಗಿತ್ತು ಎಂದು ಕೇಳಿದನು. ಶಿಷ್ಯನು "ನನ್ನ ಕೊನೆಗಾಲ ಬಂದಿತೆಂದು ತಿಳಿದೆ. ಬಹಳ ಉತ್ಕಟಾವಸ್ಥೆಯಲ್ಲಿ ಇದ್ದೆ" ಎಂದನು. ಆಗ ಕ್ರಿಸ್ತನು ಅವನನ್ನು ಕುರಿತು, "ನೀನು ಆಗ ಉಸಿರಿಗಾಗಿ ಹೇಗೆ ಕಾತರನಾಗಿದ್ದೆಯೊ ಅದರಂತೆಯೇ ದೇವರಿಗೆ ಕಾತರನಾದರೆ ಅವನನ್ನು ಪಡೆಯುವೆ" ಎಂದನು.

೫. ಮಗು ಮೂರುಕಾಸಿಗಾಗಿ ತಾಯಿಯನ್ನು ಅಂಗಲಾಚಿ ಬೇಡಿಕೊಳ್ಳುತ್ತದೆ. ಕೆಲವು ಸಲ ತಾಯಿಯನ್ನು ಅದಕ್ಕಾಗಿ ಹೊಡೆ ಯುತ್ತದೆ. ಮನುಷ್ಯ ಜಗನ್ಮಾಯಿಯ ಹತ್ತಿರ ಅವಳು ತನ್ನವಳು ಎಂಬ ದೃಢವಿಶ್ವಾಸದಿಂದ ಅತ್ತರೆ ಅವನಿಗೆ ಪ್ರತಿಫಲ ಸಿಕ್ಕುತ್ತದೆ. ಜಗನ್ಮಾಯಿ ಅವನಿಂದ ಹೆಚ್ಚುಕಾಲ ಅವಿತುಕೊಂಡು ಇರಲಾರಳು.

೬. “ದಕ್ಷಿಣೇಶ್ವರದ ದೇವಿಗಾಗಿ ಸಂಜೆ ಆರತಿಯ ಸಮಯದಲ್ಲಿ ಶಂಖ ಜಾಗಟೆಗಳ ಧ್ವನಿಯನ್ನು ಕೇಳುತ್ತಲೇ ನಾನು ಗಂಗಾನದಿಯ ತೀರಕ್ಕೆ ಹೋಗಿ, ಹೇ ಜನನಿ! ಆಗಲೆ ಒಂದು ದಿನ ಕಳೆಯಿತು. ಆದರೂ ನೀನು ನಿನ್ನ ಮಗುವಿಗೆ ದರ್ಶನ ಕೊಡಲು ಕರುಣೆದೋರಲಿಲ್ಲ; ಎಂದು ಅಳುತ್ತಿದ್ದೆ” ಎಂದು ಜಗನ್ಮಯಿಗಾಗಿ ತಾವು ಪಟ್ಟ ವ್ಯಾಕುಲವನ್ನು ಶ್ರೀರಾಮಕೃಷ್ಣರು ಹೇಳುತ್ತಿದ್ದರು.

೭. ಮನುಷ್ಯನಿಗೆ ಬಾಯಾರಿಕೆಯಾದಾಗ ಗಂಗಾನದಿಯ ನೀರು ಬಗ್ಗಡವೆಂದು ಅದನ್ನು ಕುಡಿಯದೆ ನೀರಿಗಾಗಿ ಭಾವಿಯನ್ನು ತೋಡಲು ಹೋಗುವನೇನು? ಯಾರಿಗೆ ಆಧ್ಯಾತ್ಮಿಕ ದಾಹವಿಲ್ಲವೊ ಅವನು ಎಲ್ಲಾ ಧರ್ಮಗಳನ್ನೂ ದೂರುತ್ತ ಬೇಕಾದಷ್ಟು ವಾದಮಾಡುತ್ತ ಹೋಗುವನು. ಯಾರಿಗೆ ದಾಹ ಹೆಚ್ಚಾಗಿರುವುದೊ ಅವರಿಗೆ ಸೂಕ್ಷ್ಮಪರೀಕ್ಷೆಗೆ ಸಮಯ ವಿಲ್ಲ.

---

# ದೇವರಮೇಲೆ ಭಕ್ತಿ ಮತ್ತು ಭಾವೋನ್ಮತ್ತತೆ

೧. ಲಕ್ಷಾಂತರ ರೂಪಾಯಿ ಬೆಲೆ ಬಾಳುವ ವಜ್ರ ಮುತ್ತು ಪೇಟೆಯಲ್ಲಿ ದೊರಕುತ್ತವೆ. ಆದರೆ ಭಗವದ್ಭಕ್ತರು ದೊರಕುವುದು ಎಷ್ಟು ಕಡಿಮೆ!

೨ ಸಾಧಾರಣ ಕನ್ನಡಿ ಯಾವ ಪ್ರತಿಬಿಂಬವನ್ನು ಹೊಂದಲಾರದು. ಆದರೆ ಛಾಯಾ ಯಂತ್ರದ ಕನ್ನಡಿ, ರಸಾಯನಿಕ ಲೇಪನವನ್ನು ಪಡೆದದ್ದು ಮಾತ್ರ ಪ್ರತಿಬಿಂಬವನ್ನು ಹೊಂದುವುದು. ಇದರಂತೆಯೇ ಪ್ರೇಮದಿಂದ ಲೇಪನವಾದ ಹೃದಯ ಮಾತ್ರ ದೇವರನ್ನು ಪ್ರತಿಬಿಂಬಿಸುವುದು. ಶುದ್ಧ ಹೃದಯದಲ್ಲಿ ಭಕ್ತಿ ಇಲ್ಲದೆ ಇದ್ದರೂ ಚಿತ್ರ ಪ್ರತಿಬಿಂಬಿಸುವುದಿಲ್ಲ.

೩. ಪ್ರೇಮವೆಂದರೇನು? ಹರಿಯ ಮಧುರ ನಾಮವನ್ನು ಉಚ್ಚರಿಸುವಾಗ ಯಾವನು ಪ್ರಪಂಚವನ್ನೆಲ್ಲ ಮರೆಯುವನೋ ಮತ್ತು ತನ್ನ ದೇಹವನ್ನೇ ಮರೆಯುವನೋ ಅದು ಪ್ರೇಮ.

೪. ಮೊದಲು ಭಾವ, ಅನಂತರ ಪ್ರೇಮ, ಕೊನೆಗೆ ಭಾವ ಸಮಾಧಿ. ಅನೇಕ ಜನರು ಸೇರಿ ಭಜನೆ ಮಾಡುವಾಗ, "ನಿತಾಯಿ ಹಮಾರ್ ಮಾತಾ ಹತಿ" (ನನ್ನ ನಿತಾಯಿ ಒಂದು ಮದ ಹಸ್ತಿ) ಎಂಬುದನ್ನು ಕೇಳಿರುತ್ತೀಯೆ. ಗುಂಪಿನಲ್ಲಿ ಯಾರಿಗಾದರೂ ಭಾವ ಬಂದರೆ ಅವನು ಹತಿ ಎಂದು ಮಾತ್ರ ಉಚ್ಚರಿಸಬಲ್ಲನು. ಅನಂತರ ಅವನು ಪ್ರೇಮೋನ್ಮತ್ತನಾದಾಗ ಇದನ್ನು ಕೂಡ ಹೇಳಲು ನಿಶ್ಯಕ್ತನಾಗುವನು. ಕೊನೆಗೆ ತನ್ನನ್ನು ತಾನೆ ಮರೆತಾಗ (ಭಾವೋನ್ಮತ್ತನಾದಾಗ) ಹ ಎಂಬ ಮೊದಲನೆ ಪದವನ್ನು ಮಾತ್ರ ಉಚ್ಚರಿಸಬಲ್ಲನು. ಹೀಗೆ ಅವನು ಕ್ರಮೇಣ ಮೂಕನಾಗಿ ಬಾಹ್ಯ ಪ್ರಜ್ಞಾಶೂನ್ಯನಾಗುವನು.

೫. ಆನೆಯೊಂದು ಗುಡಿಸಿಲಿನ ಬಳಿಗೆ ಹೋದರೆ ಅದನ್ನು ಬುಡ ಸಹಿತ ಅಲ್ಲಾಡಿಸಿ ಕೊನೆಗೆ ಅದನ್ನು ಉರುಳಿಸುವಂತೆ ಭಗವಂತನ ಅದ್ಭುತ ಪ್ರೇಮ ದೇಹವೆಂಬ ಮನುಷ್ಯನ ಯಂತ್ರವನ್ನು ಕೆಳಗೆ ಉರುಳಿಸುವುದು.

೬. ನಿಜವಾದ ಭಕ್ತ, "ಹೇ ದೇವ, ನಾನು ಯಂತ್ರ, ನೀನು ಯಾಂತ್ರಿಕ ; ನಾನು ಕೋಣೆ, ನೀನು ಅದರಲ್ಲಿ ವಾಸಿಸುವವನು ; ನಾನು ರಥ, ನೀನು ಸಾರಥಿ; ನೀನು ಪ್ರೇರೇಪಿಸಿದಂತೆ ನಾನು ಮಾತನಾಡುತ್ತೇನೆ; ನೀನು ಇಚ್ಛಿಸಿದಂತೆ ನಾನು ಮಾಡುತ್ತೇನೆ, ನಿನ್ನ ಆಜ್ಞಾನುಸಾರ ನಡೆಯುತ್ತೇನೆ" ಎನ್ನುವನು.

೭. ಭಕ್ತಿಯೊಂದೆ ಒಬ್ಬನ ಪ್ರಾಪಂಚಿಕ ಕೆಲಸವನ್ನು ಕಡಿಮೆಮಾಡುವುದು. ಯಾರು ದೇವರನ್ನು ಪ್ರೀತಿಸುತ್ತಾರೆಯೊ ಅವರು ಎಂದಿಗೂ ಪ್ರಾಪಂಚಿಕ ವಸ್ತುಗಳನ್ನು ಪ್ರೀತಿಸುವುದಿಲ್ಲ. ಕಲ್ಲುಸಕ್ಕರೆಯಿಂದ ಮಾಡಿದ ಶರಬತ್ತನ್ನು ಯಾರು ಒಮ್ಮೆ ರುಚಿ ನೋಡಿರುವರೋ ಅವರು ಬೆಲ್ಲದ ಪಾನಕಕ್ಕೆ ಆಸೆ ಪಡುವುದಿಲ್ಲ.

೮. ದೇವರ ಮೇಲೆ ನಿಜವಾದ ಪ್ರೇಮಭಕ್ತಿಯನ್ನು ಪಡೆಯುವವರಿಗೆ, ಅಂದರೆ ದೇವರ ಹೆಸರನ್ನು ಕೇಳಿದ ತಕ್ಷಣವೇ ಪ್ರೇಮಾಶ್ರುಗಳು ಹರಿದು ರೋಮಾಂಚನವಾಗುವವರಿಗೆ ಮಾತ್ರ ಸಂಧ್ಯ ಮತ್ತು ಆಹ್ನೀಕ, ಇವು ಅನವಶ್ಯಕ.

೯. ಜಾತ್ರೆಗಳಲ್ಲಿ (ದೊಂಬಿದಾಸರ ಆಟದಲ್ಲಿ) ಎಲ್ಲಿಯವರೆಗೆ ಸಂಗೀತ ನಡೆಯುತ್ತಿರುವುದೋ, ಹಾಡುವವರು ತಾರಸ್ವರದಲ್ಲಿ "ಹೇ ಕೃಷ್ಣ, ಪ್ರತ್ಯಕ್ಷನಾಗು, ನಿನ್ನ ದರ್ಶನವನ್ನು ನೀಡು" ಎಂದು ಕೂಗುತ್ತಿರುವರೋ ಅಲ್ಲಿಯವರೆಗೆ ಕೃಷ್ಣನ ಪಾತ್ರವನ್ನು ಹಾಕುವವನು ಇದನ್ನು ಲೆಕ್ಕಿಸುವುದೇ ಇಲ್ಲ. ಗುಡಿಗುಡಿ ಸೇದುತ್ತ ಹರಟೆ ಹೊಡೆಯುತ್ತ ನಿಧಾನವಾಗಿ ಪಾತ್ರ ವನ್ನು ಹಾಕಿಕೊಳ್ಳುವನು. ಶಬ್ದವೆಲ್ಲ ನಿಂತಮೇಲೆ ನಾರದಋಷಿ ಮಧುರವಾಗಿ ಪ್ರೀತಿಯಿಂದ "ಹೇ ಗೋವಿಂದ, ನನ್ನ ಜೀವದ ಜೀವ, ನನ್ನ ಪ್ರಾಣವೆ, ನಾನು ಸಾಯುವೆನು" ಎಂದು ಹಾಡನ್ನು ಮೊದಲು ಮಾಡಿದ ತಕ್ಷಣವೆ ಕೃಷ್ಣನು ರಂಗಭೂಮಿಯ ಮೇಲೆ ಬರುವನು. ಸಾಧಕನ ಸ್ವಭಾವವೂ ಹೀಗೆಯೆ ಎಲ್ಲಿಯವರೆಗೆ ಅವನು ಜೋರಾಗಿ "ಬಾ ಹೇ ದೇವ, ನನಗೆ ಪ್ರತ್ಯಕ್ಷನಾಗು" ಎಂದು ಹಾಡುವನೋ ಅಲ್ಲಿಯ ವರೆಗೆ ದೇವರು ಅವನಿಂದ ತುಂಬ ದೂರದಲ್ಲಿ ಇರುವನು ಎಂದು ತಿಳಿಯಿರಿ. ದೇವರು ನಿಜವಾಗಿ ಅವನಿಗೆ ಕಂಡಾಗ ಅವನು ಸುಮ್ಮನಾಗು ವನು. ಶಾಂತಿಯಿಂದ ಕೂಡಿರುವನು. ಹೃತ್ಪೂರ್ವಕವಾಗಿ ಭಕ್ತನು ದೇವರನ್ನು ಕರೆದಾಗ ಅವನಿಗೆ ಪ್ರತ್ಯಕ್ಷನಾಗದೆ ಸುಮ್ಮನೆ ಇರಲಾರ.

೧೦. ಅಹಲ್ಯೆ ರಾಮಚಂದ್ರನಿಗೆ ಹೀಗೆ ಹೇಳಿದಳು: "ಹೇ ರಾಮ! ಹಂದಿಯಾಗಿ ಹುಟ್ಟಿದರೂ ನಾನು ಅದನ್ನು ಲೆಕ್ಕಿಸುವುದಿಲ್ಲ. ಆದರೆ ಅನವರತವೂ ನಿನ್ನನ್ನು ಧ್ಯಾನಿಸುವುದನ್ನು ಮಾತ್ರ ತಪ್ಪಿಸಬೇಡ. ಮತ್ತಾವ ವರವೂ ನನಗೆ ನಿನ್ನಿಂದ ಬೇಕಾಗಿಲ್ಲ."

---

# ಧ್ಯಾನ

೧. ಸಾತ್ತ್ವಿಕ ಸ್ವಭಾವದವನು ಹೇಗೆ ಧ್ಯಾನಮಾಡುತ್ತಾನೆ ನಿನಗೆ ಗೊತ್ತೆ? ಸೊಳ್ಳೆ ಪರದೆಯೊಳಗೆ ಹಾಸಿಗೆಯಮೇಲೆ ರಾತ್ರಿವೇಳೆ ಧ್ಯಾನಮಾಡುತ್ತಾನೆ. ಅವನ ಮನೆಯವರು ಇವನು ನಿದ್ದೆಮಾಡುತ್ತಿರು ವನು ಎಂದು ತಿಳಿಯುವರು. ಪರಿಶುದ್ಧನಾದ ಭಕ್ತನು ತನ್ನ ಭಕ್ತಿಯನ್ನು ಎಂದಿಗೂ ಹೊರಗೆ ತೋರುವುದಿಲ್ಲ.

೨. ಧ್ಯಾನಮಾಡುವಾಗ ಕೆಲವು ವೇಳೆ ಅವನು ಯೋಗ ನಿದ್ರೆಗೆ ಹೋಗುತ್ತಾನೆ. ಅಂತಹ ಸಮಯಗಳಲ್ಲಿ ಹಲವು ಸಾಧಕರು ಅನೇಕ ದಿವ್ಯದರ್ಶನಗಳನ್ನು ಕಾಣುತ್ತಾರೆ.

೩. ಧ್ಯಾನಕ್ಕೆ ಕುಳಿತಾಗ ಸಂಪೂರ್ಣವಾಗಿ ನೀನು ಅದರಲ್ಲಿ ನಿರತನಾಗು. ಧ್ಯಾನದಲ್ಲಿ ಏಕಾಗ್ರನಾದರೆ ಪಕ್ಷಿ ತನ್ನ ಮೇಲೆ ಕುಳಿತಿದೆ ಎನ್ನುವುದು ಕೂಡ ಗೊತ್ತಾಗಬಾರದು. ದಕ್ಷಿಣೇಶ್ವರ ಕಾಳಿಕಾ ದೇವಾಲಯದ ನಾಟ್ಯಮಂದಿರದಲ್ಲಿ ನಾನು ಧ್ಯಾನಕ್ಕೆ ಕುಳಿತುಕೊಳ್ಳು ತ್ತಿದ್ದಾಗ ಗುಬ್ಬಚ್ಚಿ ಮತ್ತು ಇನ್ನೂ ಇತರ ಸಣ್ಣ ಹಕ್ಕಿಗಳು ನನ್ನ ದೇಹದ ಮೇಲೆ ಕುಳಿತು ಹಾರಾಡುತ್ತಿದ್ದವು ಎಂದು ಎಲ್ಲರೂ ಹೇಳಿದರು.

---

# ಸಾಧನ ಮತ್ತು ಆಹಾರ

೧. ಯಾರು ಹವಿಷ್ಯಾನ್ನವನ್ನು ಉಂಡರೂ ದೇವರನ್ನು ಪಡೆಯಲು ಇಚ್ಛಿಸುವುದಿಲ್ಲವೊ ಅವರಿಗೆ ಅದು ಗೋಮಾಂಸದಷ್ಟೆ ಕೆಟ್ಟದ್ದು. ಅದಲ್ಲದೆ ಯಾರು ಗೋಮಾಂಸದಮೇಲೆ ಜೀವಿಸಿದ್ದರೂ ದೇವರನ್ನು ಹೊಂದಲು ಯತ್ನಿಸುವರೋ ಅವರಿಗೆ ಅದು ಹವಿಷ್ಯಾನ್ನದಷ್ಟೆ ಒಳ್ಳೆಯದು.

೨. ಗತಿಸಿದ ಮಾನ್ಯ ವಿಜಯ ಕೃಷ್ಣ ಗೋಸ್ವಾಮಿಯ ಅತ್ತೆ ಒಂದು ದಿನ ಶ್ರೀರಾಮಕೃಷ್ಣರ ದರ್ಶನಾರ್ಥವಾಗಿ ಬಂದಳು. ಶ್ರೀ ರಾಮ ಕೃಷ್ಣರು ಆಕೆಗೆ "ನೀನು ಸರಿಯಾದ ದಾರಿಯಲ್ಲಿ ಹೋಗುತ್ತಿರುವೆ, ಪ್ರಪಂಚದಲ್ಲಿದ್ದರೂ ಮನಸ್ಸನ್ನು ದೇವರಿಗೆ ಕೊಟ್ಟಿರುವೆ" ಎಂದರು. ಆಕೆಯು "ಅದು ಹೇಗೆ? ನಾನು ಮುಂದುವರಿಯುತ್ತಿರುವುದು ನನಗೆ ಕಾಣಿಸುವುದಿಲ್ಲ; ನಾನಿನ್ನೂ ಮತ್ತೊಬ್ಬರ ಎಂಜಲನ್ನು ತಿನ್ನಲಾರೆ" ಎಂದಳು. ಅದಕ್ಕೆ ಶ್ರೀರಾಮಕೃಷ್ಣರು, "ನೀನು ಹೇಳುವುದೇನು? ಮತ್ತೊಬ್ಬರ ಎಂಜಲನ್ನು ತಿನ್ನಬೇಕಾದುದೆ ಸೇರುವ ಗುರಿಯೇನು? ನಾಯಿ ನರಿಗಳು ಇಂತಹ ಎಂಜಲನ್ನು ತಿನ್ನುತ್ತವೆ. ಇದರಿಂದ ಬ್ರಹ್ಮ ಜ್ಞಾನ ಬರುವುದೆ?" ಎಂದರು.

# ಕೃಪಾಕಟಾಕ್ಷ

೧. ಕತ್ತಲೆ ಕೋಣೆಯಲ್ಲಿ ಗೀರಿದ ಬೆಂಕಿ ಕಡ್ಡಿಯೊಂದು ಹಲವು ಶತಮಾನಗಳಿಂದ ಸೇರಿದ ಕತ್ತಲೆಯನ್ನು ಓಡಿಸುವುದು. ಇದರಂತೆಯೇ ಒಮ್ಮೆ ಭಗವಂತನು ತನ್ನ ಕೃಪಾಕಟಾಕ್ಷವನ್ನು ಬೀರಿದರೆ ಹಲವು ಜನ್ಮದಿಂದ ಮೇಲೆಮೇಲೆ ಆವರಿಸಿದ ಪಾಪವನ್ನು ಕ್ಷಣದಲ್ಲಿ ನಾಶ ಮಾಡುವುದು.

೨. ಮಲಯಮಾರುತ ಬೀಸಿದರೆ ಒಳಗೆ ದಿಂಡಿರುವ ಮರಗಳೆಲ್ಲ ಚಂದನ ಮರಗಳಾಗುವುವು. ಆದರೆ ಯಾವುದರಲ್ಲಿ ದಿಂಡು ಇರುವುದಿಲ್ಲವೋ (ಬೊಂಬು, ಬಾಳೆ, ಇತ್ಯಾದಿ) ಅವುಗಳು ಬದಲಾಯಿಸುವುದಿಲ್ಲ. ಇದರಂತೆಯೇ ದೇವರ ಕಟಾಕ್ಷ ದೊರಕಿದರೆ ಒಳ್ಳೆಯ ಸ್ವಭಾವ ಉಳ್ಳವರು ತಕ್ಷಣವೇ ಮಹಾತ್ಮರಾಗಿ ಪರಿವರ್ತನ ಹೊಂದುವರು. ಆದರೆ ಕೆಲಸಕ್ಕೆ ಬಾರದವರು ಮತ್ತು ಪ್ರಪಂಚದಲ್ಲಿ ಮಗ್ನರಾಗಿರುವವರು ಸುಲಭವಾಗಿ ಬದಲಾಯಿಸುವುದಿಲ್ಲ.

೩. ಆಟದ ಮೈದಾನದಲ್ಲಿ ಎಲ್ಲಿಯವರೆಗೆ ತಾಯಿ ಬರುವುದಿಲ್ಲವೋ ಅಲ್ಲಿಯವರೆಗೆ ಮಕ್ಕಳು ಆಟದಲ್ಲಿ ಮಗ್ನರಾಗಿರುವರು. ಅಂಜಿಕೆ ಆತಂಕಗಳಾವುವೂ ಅವರನ್ನು ಬಾಧಿಸುವುದಿಲ್ಲ. ಅವರು ತಮ್ಮ ಆಟದಲ್ಲಿ ಮಗ್ನರಾಗಿರುವರು. ಆದರೆ ತಾಯಿ ಬಂದ ತಕ್ಷಣವೆ ಅವು ತಮ್ಮ ಆಟದ ಸಾಮಾನನ್ನು ಆಚೆಗೆಸೆದು "ಅಮ್ಮ ಅಮ್ಮ" ಎಂದು ಅಳುತ್ತ ಓಡುವುವು. ನೀವು ಕೂಡ ಐಶ್ವರ್ಯ ಕೀರ್ತಿ ಮುಂತಾದ ಆಟದ ಸಾಮಾನಿನಲ್ಲಿ ಈಗ ಮಗ್ನರಾಗಿರುವಿರಿ. ನಿಮಗೂ ಕೂಡ ಇದು ಬಹಳ ಸಂತೋಷವಾಗಿರುವಂತೆ ಕಾಣುತ್ತದೆ. ಯಾವ ಆತಂಕವೂ ಇಲ್ಲ, ಅಂಜಿಕೆಯೂ ಇಲ್ಲ. ಆದರೆ ನಿಮಗೆ ಒಮ್ಮೆ ಆನಂದಮಯಿಯ ದರ್ಶನವಾಯಿತೆಂದರೆ ಐಶ್ವರ್ಯ ಕೀರ್ತಿ ಗೌರವಗಳ ಮೇಲೆ ಸ್ವಲ್ಪವೂ ಇಚ್ಛೆ ಇರುವುದಿಲ್ಲ. ನಿಮ್ಮ ಆಟದ ಸಾಮಾನನ್ನೆಲ್ಲಾ ಆಚೆಗೆಸೆದು ಆಕೆಯ ಬಳಿಗೆ ಓಡುವಿರಿ.

೪. ಕೊಳೆ ಮತ್ತು ಕೆಸರಿನಿಂದ ಮೈಲಿಗೆ ಮಾಡಿಕೊಳ್ಳುವುದು ಮಕ್ಕಳ ಸ್ವಭಾವ. ಆದರೆ ತಂದೆತಾಯಿಗಳು ಮೈಲಿಗೆಯಲ್ಲಿ ಇರುವಂತೆ

ಬಿಡುವುದಿಲ್ಲ. ಇದರಂತೆಯೇ ಪ್ರಪಂಚದ ಪ್ರಲೋಭನಗಳಿಗೆ ಸಿಕ್ಕಿ ಮನುಷ್ಯನು ಎಷ್ಟು ಕೊಳೆಯಾಗಿದ್ದರೂ ಕೂಡ ಪರಿಶುದ್ಧರಾಗುವುದಕ್ಕೆ ದೇವರು ಅವಕಾಶವನ್ನು ಕಲ್ಪಿಸುತ್ತಾನೆ.

---

# ಸಿದ್ಧನ ಲಕ್ಷಣ

೧. ಕಬ್ಬಿಣವನ್ನು ಒಮ್ಮೆ ಸ್ಪರ್ಶಮಣಿಗೆ ತಾಕಿಸಿ ಚಿನ್ನಮಾಡಿದ ಮೇಲೆ ಅದನ್ನು ನೆಲದಲ್ಲಿ ಬೇಕಾದರೆ ಹೂತಿಡಬಹುದು; ಅಥವಾ ಗೊಬ್ಬರದ ರಾಶಿಯಲ್ಲಿ ಬೇಕಾದರೂ ಎಸೆಯಬಹುದು. ಆದರೂ ಅದು ಚಿನ್ನದ ಸ್ವಭಾವವನ್ನು ಇಟ್ಟುಕೊಂಡಿರುವುದು. ಯಾವನು ದೇವರನ್ನು ನೋಡಿರುವನೊ ಅವನ ಸ್ವಭಾವವೂ ಹೀಗೆಯೆ ಪ್ರಲೋಭನಗಳಿಂದ ತುಂಬಿದ ಸಂಸಾರದ ಮಧ್ಯದಲ್ಲಿರಲೀ ಅಥವಾ ನಿರ್ಜನಾರಣ್ಯದಲ್ಲಿರಲಿ ಯಾವುದೂ ಅವನನ್ನು ಕೆಡಿಸುವುದಿಲ್ಲ.

೨. ಸ್ಪರ್ಶಮಣಿಯ ಸೋಂಕಿನಿಂದ ಉಕ್ಕಿನ ಕತ್ತಿ ಚಿನ್ನದ ಕತ್ತಿಯಾಗುವುದು. ಅದಕ್ಕೆ ತನ್ನ ಹಿಂದಿನ ಆಕಾರವಿದ್ದರೂ ಮತ್ತೊಬ್ಬರಿಗೆ ಹಿಂಸೆಯನ್ನು ಕೊಡಲು ಸಾಧ್ಯವಾಗುವುದಿಲ್ಲ. ಇದರಂತೆಯೇ ಯಾರು ದೇವರ ಪಾದ ಕಮಲಗಳನ್ನು ಮುಟ್ಟಿರುವರೋ ಅವರ ಬಾಹ್ಯ ಆಕಾರ ಬದಲಾವಣೆಯಾಗದಿದ್ದರೂ ಅವನು ಇನ್ನೊಬ್ಬರಿಗೆ ಹಿಂಸೆಯನ್ನು ಮಾಡಲಾರ.

೩. ಒಬ್ಬ ಶ್ರೀರಾಮಕೃಷ್ಣರನ್ನು "ಸಿದ್ಧಪುರುಷನು ಯಾವ ಸ್ವಭಾವವನ್ನು ಹೊಂದುವನು ?" ಎಂದು ಪ್ರಶ್ನಿಸಿದನು. ಅದಕ್ಕೆ ಇವರು ಆಲೂಗಡ್ಡೆ, ಬದನೇಕಾಯಿಗಳನ್ನು ಬೇಯಿಸಿದಾಗ ಅವು ಮೃದುವಾಗುವಂತೆ, ಮನುಷ್ಯನೂ ಸಿದ್ಧನಾದಮೇಲೆ ಮೃದುಸ್ವಭಾವದವನಾಗುವನು. ಅಹಂಕಾರದಿಂದ ಪಾರಾಗುವನು" ಎಂದರು.

೪. ಶ್ರೀರಾಮಕೃಷ್ಣರು ತಮ್ಮ ದೇಹವನ್ನು ತೋರುತ್ತಾ, "ಇದೊಂದು ಕ್ಷೇತ್ರ ಅಷ್ಟೆ, ಜಗನ್ಮಾಯಿಯ ವಾಸಸ್ಥಳಕ್ಕೆ ಯೋಗ್ಯವಾಗಿದೆ" ಎಂದು ಹೇಳುತ್ತಿದ್ದರು.

೫. ರಾಮಪ್ರಸಾದನ ಹಾಡುಗಳು ಎಂದಿಗೂ ತಮ್ಮ ನವೀನತೆಯನ್ನು ಕಳೆದುಕೊಳ್ಳುವುದಿಲ್ಲ. ಅದು ಏತಕ್ಕೆ ಗೊತ್ತೆ ? ಅವನು ಅದನ್ನು ಬರೆದಾಗ ಜಗನ್ಮಾಯಿಯು ಅವನ ಹೃದಯದಲ್ಲಿ ನೆಲೆಸಿದ್ದಳು

೬. ಸಿದ್ಧಾವಸ್ಥೆಯನ್ನು ಅನೇಕ ವಿಧದಲ್ಲಿ ಹೊಂದುವರು. ಸ್ವಪ್ನ ಸಿದ್ಧರಿರುವರು, ಮಂತ್ರಸಿದ್ಧರಿರುವರು, ಹಠಾತ್ ಸಿದ್ಧರಿರುವರು ಮತ್ತು ನಿತ್ಯಸಿದ್ಧರಿರುವರು.

೭. ಸ್ವಪ್ನದಲ್ಲಿ ಮಂತ್ರೋಪದೇಶವನ್ನು ಪಡೆದು ಅದನ್ನು ಉಚ್ಚರಿಸಿದ್ದರಿಂದ ಅವರು ಸ್ವಪ್ನಸಿದ್ಧರು. ಯೋಗ್ಯನಾದ ಗುರುವಿನಿಂದ ಮಂತ್ರೋಪದೇಶವನ್ನು ಪಡೆದು ಅವನ ಆಜ್ಞಾನುಸಾರ ಸಾಧನೆಯನ್ನು ಮಾಡಿದವರು ಮಂತ್ರಸಿದ್ಧರು. ಅವರು ಸಿದ್ಧರಾಗುವ ರೀತಿ ಇದು. ಇದ್ದಕ್ಕಿದ್ದಂತೆಯೇ ಗುರುವಿನ ಅನುಗ್ರಹದಿಂದ ಸಿದ್ಧರಾಗುವವರು ಹಠಾತ್ ಸಿದ್ಧರು. ಆಜನ್ಮಸಿದ್ಧರಾಗಿರುವವರೇ ನಿತ್ಯಸಿದ್ಧರು. ಅವರು ಕುಂಬಳಕಾಯಿ ಅಥವ ಸೋರೇಕಾಯಿಯ ಬಳ್ಳಿಯಂತೆ. ಕಾಯಿ ಮೊದಲು ಬಿಟ್ಟನಂತರ ಹೂವಾಗುವುದು.

೮. ಸೇತುವೆಯ ಕೆಳಗೆ ಸದಾ ನೀರು ಓಡುತ್ತ ಕೆಳಗೆ ಹೇಗೆ ನಿಲ್ಲುವುದಿಲ್ಲವೋ ಹಾಗೆಯೇ ಮುಕ್ತನ ಕೈಯಿಂದ ಹಣ ನಿಲ್ಲದೆ ಓಡುವುದು. ಇಂತಹ ಮನುಷ್ಯನಿಗೆ ಸ್ವಲ್ಪವಾದರೂ ವ್ಯವಹಾರ ಜ್ಞಾನವಿರುವುದಿಲ್ಲ.

೯. ಯಾರು ಧ್ಯಾನಸಿದ್ಧರೋ ಅವರಿಗೆ ಮುಕ್ತಿ ಹತ್ತಿರವೇ ಇದೆ ಎನ್ನುವುದು ಹಳೆಯ ನಾಣ್ನುಡಿ. ಒಬ್ಬ ಯಾವಾಗ ಧ್ಯಾನಸಿದ್ಧನಾಗುತ್ತಾನೆ ಎಂಬುದು ನಿನಗೆ ಗೊತ್ತೆ? ಧ್ಯಾನಕ್ಕೆ ಕುಳಿತ ತಕ್ಷಣವೇ ಪರಮಾತ್ಮನಲ್ಲಿ ತನ್ಮಯನಾದಾಗ.

೧೦. ಮುಕ್ತ ಪ್ರಪಂಚದಲ್ಲಿ ಹೇಗೆ ಬಾಳುತ್ತಾನೆ? ನೀರಿನಲ್ಲಿ ಮುಳುಗುವ ಹಕ್ಕಿಯಂತೆ ಅವನು ಪ್ರಪಂಚದಲ್ಲಿ ಜೀವಿಸುತ್ತಾನೆ. ಅದು ನೀರಿನಲ್ಲಿ ಮುಳುಗಿದರೂ ನೀರು ಅದನ್ನು ನೆನೆಸುವುದಿಲ್ಲ ಅದಕ್ಕೆ ಅಂಟಿಕೊಂಡಿರುವ ಕೆಲವು ನೀರಿನ ತೊಟ್ಟುಗಳು ರೆಕ್ಕೆಯನ್ನು ಬಡಿದ ತಕ್ಷಣವೇ ಸರಾಗವಾಗಿ ಜಾರಿ ಹೋಗುವುದು.

೧೬. ಮಾಗಿದ ಮಾವಿನ ಹಣ್ಣು ತನಗೆ ತಾನೇ ಬೀಳುವಂತೆ ಪೂರ್ಣಜ್ಞಾನವನ್ನು ಮನುಷ್ಯನು ಪಡೆದಮೇಲೆ ಬಂಧನಗಳೆಲ್ಲ ತಮಗೆ ತಾನೆ ಕಳಚಿ ಬೀಳುವುವು. ಬಲಾತ್ಕಾರವಾಗಿ ಜಾತಿಬಂಧನಗಳನ್ನು ತೊರೆಯುವುದು ಹಾಸ್ಯಕರ.

೧೭. ಸತ್ತ್ವ (ಪವಿತ್ರತೆ) ರಜಸ್ಸು (ಫಲಾಪೇಕ್ಷೆಗಾಗಿ ಕಾರ್ಯದಲ್ಲಿ ನಿರತರಾಗಿರುವುದು) ಮತ್ತು ತಮಸ್ಸು (ಅಜ್ಞಾನ) ಎಂಬ ಮೂರು ವಿಧದ ಗುಣಗಳಿರುವುವು. ಇವುಗಳಲ್ಲಿ ಯಾವುದೂ ದೇವರನ್ನು ಸೇರಲಾರವು. ಇದನ್ನು ನಿದರ್ಶಿಸುವ ಒಂದು ಕಥೆಯನ್ನು ಕೇಳಿ. ಒಬ್ಬ ಕಾಡಿನಲ್ಲಿ ಪ್ರಯಾಣಮಾಡುತ್ತಿದ್ದಾಗ ಮೂರು ಜನ ಕಳ್ಳರು ಮೇಲೆ ಬಿದ್ದು ಅವನ ಹತ್ತಿರ ಇದ್ದುದನ್ನೆಲ್ಲ ಸುಲಿದುಕೊಂಡರು. ಕಳ್ಳರಲ್ಲಿ ಒಬ್ಬನು ಇವನನ್ನು ಜೀವಸಹಿತ ಬಿಟ್ಟು ಪ್ರಯೋಜನವೇನೆಂದು ಅವನನ್ನು ಕತ್ತರಿಸಲು ಕೊಡಲಿಯನ್ನು ಮೇಲಕ್ಕೆ ಎತ್ತಿದನು. ಮತ್ತೊಬ್ಬ ಕಳ್ಳನು ಇದನ್ನು ವಿರೋಧಿಸಿ, "ಇವನನ್ನು ಕೊಲ್ಲಬೇಡ. ಕೊಂದು ಪ್ರಯೋಜನವೇನು? ಇವನ ಕೈಕಾಲುಗಳನ್ನು ಕಟ್ಟಿ ಇಲ್ಲೇ ಬಿಟ್ಟುಬಿಡು" ಎಂದನು. ಇದನ್ನು ಒಪ್ಪಿ ಎಲ್ಲರೂ ಅವನ ಮೇಲೆ ಬಿದ್ದು ಕೈಕಾಲುಗಳನ್ನು ಕಟ್ಟಿ ಮುಂದೆ ಹೊರಟರು. ಸ್ವಲ್ಪ ಹೊತ್ತಾದ ಮೇಲೆ ಒಬ್ಬ ಕಳ್ಳ ಬಂದಿಯ ಹತ್ತಿರ ಬಂದು "ಅಯ್ಯೋ ಪಾಪ! ನಿನಗೆ ಎಷ್ಟು ವ್ಯಥೆಯಾಗಿರಬಹುದೊ! ನಾನು ತಕ್ಷಣವೆ ನಿನ್ನ ಕಟ್ಟನ್ನು ಬಿಚ್ಚುತ್ತೇನೆ" ಎಂದು ಅವನನ್ನು ಬಿಡಿಸಿ ತನ್ನನ್ನು ಹಿಂಬಾಲಿಸುವಂತೆ ಹೇಳಿದನು. ಹೆದ್ದಾರಿ ಸಮೀಪವಾದಾಗ ಕಳ್ಳನು ಪ್ರಯಾಣಿಕನಿಗೆ 'ನೀನು ಈ ದಾರಿಯಲ್ಲಿ ಹೋದರೆ ಊರನ್ನು ಸೇರುವೆ" ಎಂದನು. ಕೃತಜ್ಞನಾದ ಪ್ರಯಾಣಿಕನು "ನೀನು ನನ್ನ ಪ್ರಾಣವನ್ನು ಉಳಿಸಿರುವೆ, ದಯವಿಟ್ಟು ನಮ್ಮ ಮನೆಗೆ ಬಾ" ಎಂದನು. ಅದಕ್ಕೆ ಕಳ್ಳ "ಇಲ್ಲ. ನಾನು ಅಲ್ಲಿಗೆ ಬರಲಾರೆ. ಜನರಿಗೆ ಗೊತ್ತಾಗುವುದು. ನಿನ್ನ ಮನೆಗೆ ನಾನು ರಸ್ತೆಯನ್ನು ಮಾತ್ರ ತೋರಿಸಬಲ್ಲೆ. ಇದನ್ನು ಮಾಡಿದ ಮೇಲೆ ನಾನು ಹೊರಟು ಹೋಗಬೇಕು" ಎಂದನು.

೧೮. ಮುಕ್ತಪುರುಷರು ಪ್ರಪಂಚದಲ್ಲಿ ಹೇಗೆ ಜೀವಿಸುವರು? ತಮ್ಮ ಸ್ವಂತ ಇಚ್ಛೆಯಾಗಲೀ ಅಹಂಕಾರವಾಗಲೀ ಇಲ್ಲದೆ ಇರುವುದರಿಂದ

ಅವರನ್ನು ಗಾಳಿಗೆ ಸಿಕ್ಕಿ ತೂರಾಡುವ ತರಗೆಲೆಗೆ ಹೋಲಿಸಬಹುದು. ಗಾಳಿ ಕೆಲವು ವೇಳೆ ಅದನ್ನು ತಿಪ್ಪೆಗುಂಡಿಗೆ ಒಯ್ಯುತ್ತದೆ ಕೆಲವು ವೇಳೆ ಶುಚಿಯಾದ ಪ್ರದೇಶಕ್ಕೆ ಒಯ್ಯುತ್ತದೆ ಮುಕ್ತಜೀವಿಗಳ ಅವಸ್ಥೆಯೂ ಹೀಗೆಯೆ.

೧೯. ನನ್ನ ಮನಸ್ಸಿಗೆ ಮರ್ಮಾಂತಿಕವಾದ ಯಾತನೆಯನ್ನು ಕೊಡುವ ಪದಗಳು ಮೂರು: ಗುರು, ಕರ್ತ ಮತ್ತು ತಂದೆ. ನಾನು ಸ್ವತಂತ್ರವ್ಯಕ್ತಿಯಲ್ಲ ದೇವರೊಬ್ಬನೇ ಸ್ವತಂತ್ರ ಅವನ ಕೈಯಲ್ಲಿ ನಾನೊಬ್ಬ ನಿಗರ್ವಿಯಾದ ಯಂತ್ರ ಮಾತ್ರ

೨೦. ಹಸಿಯ ಭತ್ತದ ಕಾಳು ಮೊಳಕೆಯಾಗುತ್ತದೆ ಬೇಯಿಸಿದ ಭತ್ತದ ಕಾಳು ಮೊಳಕೆಯಾಗುವುದಿಲ್ಲ ಇದರಂತೆಯೇ ಯಾರು ಸಿದ್ಧರಾಗಿರುವರೋ ಅವರು ಪ್ರಪಂಚದಲ್ಲಿ ಮತ್ತೊಮ್ಮೆ ಹುಟ್ಟುವುದಿಲ್ಲ

೨೧. ಯಾವ ಸ್ಥಿತಿಗೆ ಸೇರಿದವರೆ ಪರಮಹಂಸರೆಂದು ಕರೆಯುತ್ತಾರೆ? ಹಂಸ ಹಾಲಿನೊಂದಿಗೆ ಬೆರೆಸಿದ ನೀರನ್ನು ಬಿಟ್ಟು ಬರಿಯ ಹಾಲನ್ನೆ ಹೇಗೆ ಕುಡಿಯುವುದೋ ಹಾಗೆಯೇ ಅವರು ಸತ್ಯವನ್ನು ಮಾತ್ರ ಸ್ವೀಕರಿಸಿ ಮಿಥ್ಯವನ್ನು ತೊರೆಯುವರು.

೨೨. ಮೊದಲು ಅಜ್ಞಾನ ನಂತರ ಜ್ಞಾನ ಆದರೆ ಇವೆರಡೂ ಸಂಬಂಧಿಕ ಪದಗಳು ಎಂದು ಒಬ್ಬನಿಗೆ ಅದ್ವಿತೀಯ ಅನುಭವವಾಗುವುದೋ ಆಗ ಅವನು ಜ್ಞಾನ ಅಜ್ಞಾನಗಳ ಮೇರೆ ಮೀರಿ ಹೋಗುವನು. ಇದಕ್ಕೆ ಸರಿಯಾದ ಒಂದು ಉದಾಹರಣೆಯನ್ನು ತೆಗೆದುಕೊಳ್ಳಿ. ನಿಮ್ಮ ಕಾಲಿಗೆ ಒಂದು ಚೂಪಾದ ಮುಳ್ಳು ಚುಚ್ಚಿದರೆ ಅದನ್ನು ಹೊರಕ್ಕೆ ತೆಗೆಯುವುದಕ್ಕೆ ಮತ್ತೊಂದು ಚೂಪಾದ ಮುಳ್ಳು ಬೇಕು ಮುಳ್ಳನ್ನು ತೆಗೆದ ಮೇಲೆ ಎರಡನ್ನೂ ಹೊರಗೆ ಎಸೆಯುತ್ತೀರಿ

೨೩. ಒಬ್ಬನು ಸಿದ್ಧನಾದ ಮೇಲೆ ದೇವರನ್ನು ಕಂಡ ಮೇಲೆ, ಅವನಿಗೆ ತಪ್ಪನ್ನು ಮಾಡುವುದಕ್ಕೆ ಸಾಧ್ಯವೇ ಆಗುವುದಿಲ್ಲ. ನುರಿತ ನೃತ್ಯಗಾರನು ಎಂದಿಗೂ ತಪ್ಪು ಹೆಜ್ಜೆಯನ್ನು ಇಡುವುದಿಲ್ಲ

೨೪. ಬೃಹಸ್ಪತಿಯ ಮಗನಾದ ಕಚ ಸಮಾಧಿ ಅನುಭವದಿಂದ ಪ್ರಪಂಚದ ಕಡೆಗೆ ಬರುವಾಗ ಋಷಿಯು 'ಈಗ ಹೇಗಿದೆ' ಎಂದನು.

ಆದಕ್ಕೆ ಕಚ, "ಈಶ್ವರನು ಸರ್ವಾಂತರ್ಯಾಮಿಯಾಗಿರುವನು ಬೇರೆ ಯಾವುದೂ ನನಗೆ ಕಾಣುವುದಿಲ್ಲ" ಎಂದನು.

---

# ವಿಶ್ವ ಧರ್ಮಗಳ ಸಮನ್ವಯ

೧ ಗ್ಯಾಸ್‌ದೀಪ ಊರಿನ ಹಲವು ಭಾಗಗಳನ್ನು ಹೆಚ್ಚು ಕಡಿಮೆ ತನಗೆ ಸಾಧ್ಯವಾದ ಮಟ್ಟಿಗೆ ಬೆಳಗುತ್ತವೆ ಆದರೆ ಎಲ್ಲಾ ದೀಪಗಳಿಗೂ ಅನಿಲ (ಗ್ಯಾಸ್) ಬರುವುದು ಒಂದು ಕಡೆಯಿಂದ ಇದರಂತೆಯೇ ಎಲ್ಲಾ ಜನಾಂಗದ ಬೋಧಕರೂ ಕೂಡ ಏಕಮಾತ್ರ ದೇವರಿಂದ ಮುಕ್ತಿಯನ್ನು ಪಡೆಯುವರು.

೨ ಒಬ್ಬನು ಮನೆಯ ಮೇಲಕ್ಕೆ ಏಣಿ, ಗಳು, ಮೆಟ್ಟಿಲು, ಅಥವಾ ಇನ್ನು ಯಾವುದಾದರೂ ವಿಧದಲ್ಲಿ ಹೋಗುವಂತೆ ದೇವರೆಡೆಗೆ ಹೋಗುವು ದಕ್ಕೆ ಕೂಡ ಹಲವು ದಾರಿಗಳಿವೆ. ಪ್ರಪಂಚದಲ್ಲಿರುವ ಧರ್ಮಗಳೆಲ್ಲ ಅವನನ್ನು ಸೇರುವುದಕ್ಕೆ ಇರುವ ಒಂದೊಂದು ಹಾದಿ.

೩. ದೇವರು ಇರುವನು ಒಬ್ಬನೆ, ಆದರೆ ಅವನಿಗೆ ಅನಂತ ನಾಮಗಳಿವೆ. ಅವನನ್ನು ಯಾವ ಹೆಸರಿನಿಂದ ಬೇಕಾದರೂ ಕರೆಯಿರಿ. ನಿಮಗೆ ತೋರಿದ ರೀತಿಯಲ್ಲಿ ಪೂಜಿಸಿ. ನೀವು ಸತ್ಯವಾಗಿಯೂ ಅವನನ್ನು ಕಾಣುವಿರಿ.

೪. ಒಬ್ಬನೇ ಸಚ್ಚಿದಾನಂದನಿರುವುದು ಎಂದು ತಿಳಿದು ಯಾರಾದರೂ ಆಗಲೀ ಸಾಧನೆಯನ್ನು ಮಾಡಿದರೆ ಅವನನ್ನು ಸೇರುವುದರಲ್ಲಿ ಸಂದೇಹ ವಿಲ್ಲ. ಅವನನ್ನು ಯಾವ ಹೆಸರಿನಿಂದಲಾದರೂ ಕರೆಯಲಿ, ಯಾವ ಭಾವದಿಂದಲಾದರೂ ಆರಾಧಿಸಲಿ.

೫. ಹಲವು ಮತಗಳು ದೇವರನ್ನು ಸೇರುವುದಕ್ಕೆ ಹಲವು ದಾರಿ ಗಳು. ಈ ಕಾಳಿಕಾ ದೇವಾಲಯಕ್ಕೆ ಬರುವುದಕ್ಕೆ ಹಲವು ದಾರಿಗಳಿವೆ. ಕೆಲವರು ದೋಣಿಯಲ್ಲಿ ಬರುತ್ತಾರೆ. ಕೆಲವರು ಗಾಡಿಯಲ್ಲಿ ಬರುತ್ತಾರೆ. ಕೆಲವರು ನಡೆದುಕೊಂಡು ಬರುತ್ತಾರೆ ಇದರಂತೆಯೇ ಹಲವರು ಹಲವು ಮತಗಳ ಮೂಲಕ ದೇವರನ್ನು ಸೇರುತ್ತಾರೆ.

೬ ತಾಯಿ ತನ್ನ ಮಕ್ಕಳೆಲ್ಲರನ್ನೂ ಸಮನಾಗಿ ಪ್ರೀತಿಸುತ್ತಾಳೆ. ಆದರೆ ಅವರವರ ಆರೋಗ್ಯಕ್ಕೆ ಅನುಸಾರವಾಗಿ ಆಹಾರವನ್ನು ಕೊಡುತ್ತಾಳೆ. ಇದರಂತೆಯೇ ದೇವರು ಜನರ ಯೋಗ್ಯತೆಗೆ ತಕ್ಕಂತೆ, ಮನಸ್ಸಿಗೆ ತಕ್ಕಂತೆ, ಅವರ ಭಾವಕ್ಕೆ ತಕ್ಕಂತೆ, ಹಲವು ವಿಧದ ಪೂಜೆಗಳನ್ನು ಒದಗಿಸಿಕೊಟ್ಟಿರುವನು.

೭ ಗತಿಸಿದ ವರ್ಗಸ್ಥ ಕೇಶಬ್‌ಚಂದ್ರಸೇನನು ಶ್ರೀ ರಾಮಕೃಷ್ಣರನ್ನು "ದೇವರು ಒಬ್ಬನೇ ಇದ್ದರೂ ಧರ್ಮಗಳಲ್ಲಿ ಪರಸ್ಪರ ದ್ವೇಷಗಳೇಕೆ ಇರುವುದು' ಎಂದು ಪ್ರಶ್ನಿಸಿದನು. ಅದಕ್ಕೆ ಶ್ರೀರಾಮಕೃಷ್ಣರು ಹೇಗೆಂದರು 'ಪ್ರತಿಯೊಬ್ಬನೂ ಇದು ನನ್ನ ಮನೆ. ಇದು ನನ್ನ ಹೊಲ ಎಂದು ತನಗೆ ಸೇರಿದುದೆಂದು ತಿಳಿದು ಅದನ್ನು ಭಾಗಮಾಡಿಕೊಳ್ಳುವನು ಆದರೆ ಮೇಲಿರುವ ಅನಂತ ಆಕಾಶವನ್ನು ಯಾರೂ ಭಾಗಿಸಲಾರರು. ಅದರಂತೆಯೇ ಸಾಧಾರಣ ಮನುಷ್ಯರು ಅಜ್ಞಾನದಿಂದ ತಮ್ಮ ಧರ್ಮವೇ ಅತ್ಯುತ್ತಮವಾದುದೆಂದು ತಿಳಿದು ಕೆಲಸಕ್ಕೆ ಬಾರದ ಹರಟೆ ಹೊಡೆಯುವರು. ಆದರೆ ಅವರ ಮನಸ್ಸು ನಿಜವಾದ ಜ್ಞಾನದ ಬೆಳಕನ್ನು ಕಂಡ ಮೇಲೆ ಜಾತಿ ಮತಗಳ ದ್ವೇಷವೆಲ್ಲ ಮಾಯವಾಗುವುದು

೮. ಪ್ರ—ಹಿಂದೂಗಳಲ್ಲಿ ಹಲವು ಜಾತಿ ಮತ್ತು ಮತಗಳು ಇರುವುದರಿಂದ ಯಾವ ಜಾತಿಯನ್ನು ಅಥವಾ ಮತವನ್ನು ಒಬ್ಬನು ಸ್ವೀಕರಿಸಬೇಕು ?

ಉ—ಪಾರ್ವತಿ ಒಮ್ಮೆ ಮಹಾದೇವನನ್ನು ಸಚ್ಚಿದಾನಂದಕ್ಕೆ ದಾರಿ ಯಾವುದೆಂದು ಕೇಳಿದಳು. ಅದಕ್ಕೆ ಮಹಾದೇವ "ಶ್ರದ್ಧೆಯೇ ದಾರಿ. ಜಾತಿ ಮತಗಳ ಭಿನ್ನತೆಯಿಂದ ಯಾವ ತೊಂದರೆಯೂ ಇಲ್ಲ" ಎಂದನು. ಪ್ರತಿಯೊಬ್ಬರೂ ತಮ್ಮ ಮತಸಾಧನೆಯನ್ನು ಭಕ್ತಿಪೂರ್ವಕವಾಗಿ ಮಾಡಲಿ.

೯. ಕ್ಷುದ್ರಮನಸ್ಸಿನವರು ಅನ್ಯ ಧರ್ಮಗಳನ್ನು ಹಳಿದು ತಮ್ಮ ಧರ್ಮವೇ ಅತ್ಯುತ್ತಮವೆಂದು ಸಾರಿ ಬೇರೆ ಪಂಗಡವನ್ನು ಮಾಡುವರು. ಯಾರ ಹೃದಯ ದೇವರಿಗಾಗಿ ಕಾತರಿಸುವುದೋ ಅವರು ಜಾತಿ ಮತಗಳ ವೈಷಮ್ಯದಿಂದ ದೂರ ಇರುವರು. ಅವರು ಸಾಧನೆಯಲ್ಲಿ ತಮ್ಮ ಕಾಲವನ್ನು ಕಳೆಯುವರು. ಹುಲ್ಲಿನ ಜೊಂಡು ಹರಿಯುತ್ತಿರುವ ನೀರಿನಲ್ಲಿ

ಬೆಳೆಯುವುದಿಲ್ಲ. ಅದು ಶೀತದಲ್ಲಿ ಮತ್ತು ಅಂಟಿಲ್ಲದ ಕಟ್ಟಿಗಳಲ್ಲಿ ಬೆಳೆಯುವುದು.

೧೦. ಮನೆಯಲ್ಲಿ ಜನರು ರುಚಿಗೆ ತಕ್ಕಂತೆ ಬೇರೆಬೇರೆ ಅಡಿಗೆಯನ್ನು ಒಂದು ಹಿಟ್ಟಿನಿಂದ ಮಾಡುವಂತೆ ದೇವರು ಒಬ್ಬನೇ ಆದರೂ ತಮ್ಮ ಭಾವಕ್ಕೆ ತಕ್ಕಂತೆ ಹಲವು ವಿಧದಲ್ಲಿ ದೇವನನ್ನು ಪೂಜಿಸುವರು

೧೧ ಇರುವವನು ಒಬ್ಬನೆ. ಆದರೆ ಹೆಸರು ಮಾತ್ರ ವ್ಯತ್ಯಾಸವಾಗುತ್ತದೆ. ಉದಾಹರಣೆಗೆ ಒಂದೇ ವಸ್ತುವಾದ ನೀರನ್ನು ಹಲವು ಪ್ರದೇಶಗಳಲ್ಲಿ ಕಾಲಕ್ಕೆ ತಕ್ಕಂತೆ ಬೇರೆಬೇರೆ ಹೆಸರಿನಿಂದ ಕರೆಯುವರು. ಬಂಗಾಳಿಯಲ್ಲಿ 'ಜೋಲ್" ಎನ್ನುವರು. ಹಿಂದಿಯಲ್ಲಿ 'ಪಾನಿ" ಎನ್ನುವರು. ಇಂಗ್ಲೀಷಿನಲ್ಲಿ "ವಾಟರ್' ಅಥವಾ 'ಆಕ್ವ" ಎನ್ನುವರು. ಪರಸ್ಪರ ಭಾಷಾಜ್ಞಾನವಿಲ್ಲದೆ ಇರುವುದರಿಂದ ಮಾತ್ರ ಒಬ್ಬರಿಗೆ ಇನ್ನೊಂದು ತಿಳಿಯುವುದಿಲ್ಲ. ಒಬ್ಬರ ಮಾತು ಇನ್ನೊಬ್ಬರಿಗೆ ತಿಳಿಯುವ ಹಾಗೆ ಇದ್ದರೆ ತಪ್ಪು ತಿಳಿವಳಿಕೆಗೆ ಅವಕಾಶವೇ ಇರುವುದಿಲ್ಲ.

೧೨ ನೀವು ಯಾವ ರೀತಿಯಲ್ಲಿ ಬೇಕಾದರೂ ಅವನನ್ನು ಧ್ಯಾನಿಸಿರಿ ಅಥವಾ ಯಾವ ಹೆಸರಿನ ಮೂಲಕವಾಗಿ ಆದರೂ ಕೂಗಿ. ಕಡೆಗೆ ನೀವು ಅವನೆಡೆಗೆ ಖಂಡಿತ ಮುಂದುವರಿಯುವಿರಿ. ಕಲ್ಲುಸಕ್ಕರೆಯಿಂದ ಮಾಡಿದ ದೋಸೆಯನ್ನು ನೇರವಾಗಿ ಬೇಕಾದರೆ ಹಿಡಿದುಕೊಳ್ಳಲಿ, ಅಥವಾ ಅಡ್ಡವಾಗಿ ಬೇಕಾದರೆ ಹಿಡಿದುಕೊಳ್ಳಲಿ ಎಲ್ಲವೂ ತಿಂದಾಗ ಒಂದೇ ರುಚಿಯಾಗಿರುವುದು

---

## ಕರ್ಮಫಲ

೧ ಪಾದರಸದಂತೆ ಪಾಪವನ್ನು ನಾವು ಎಂದಿಗೂ ಮರೆಮಾಡಲಾಗುವುದಿಲ್ಲ. ರಸದ ಔಷಧಿಯನ್ನು ಯಾವನಾದರೂ ಅತ್ಯಂತ ಗೋಪ್ಯವಾಗಿ ಉಪಯೋಗಿಸಿದರೂ ಅದು ಎಂದಾದರೊಂದು ದಿನ ಹೊರಗೆ

ಬಂದೇ ಬರುವುದು ಅದರಂತೆಯೇ ಯಾರಾದರೂ ಪಾಪವನ್ನು ಮಾಡಿ ದರೆ ಎಂದಾದರೊಂದು ದಿನ ಪ್ರಾಯಶ್ಚಿತ್ತವನ್ನು ಅನುಭವಿಸಲೇ ಬೇಕು.

೨. ರೇಷ್ಮೆ ಹುಳು ತನ್ನ ನೂಲಿನಿಂದಲೇ ಬಂದಿಯಾಗುವುದು ಅದರಂತೆಯೇ ಪ್ರಾಪಂಚಿಕ ಮನುಷ್ಯನು ತನ್ನ ಕರ್ಮದ ಬಲೆಯಲ್ಲಿ ಸಿಕ್ಕಿಬೀಳುವನು ಆದರೆ ಹುಳುವು ಚಿಟ್ಟೆಯಾದಾಗ ಅದು ಗೂಡನ್ನು ಕೊರೆದು ಹೊರಗೆ ಬಂದು ಸ್ವಾತಂತ್ರ್ಯವನ್ನು ಅನುಭವಿಸುತ್ತದೆ. ಇದರಂತೆಯೇ ಸಂಸಾರದಲ್ಲಿ ನರಳುವ ಜೀವ ವಿವೇಕ ವೈರಾಗ್ಯಗಳೆಂಬ ರೆಕ್ಕೆಗಳನ್ನು ಪಡೆಯುವುದರ ಮೂಲಕ ಮುಕ್ತನಾಗುವನು.

---

# ಕಲಿಯುಗಕ್ಕೆ ತಕ್ಕ ಧರ್ಮ

೧ ಬೆಳಿಗ್ಗೆ ಸಾಯಂಕಾಲ ಹರಿಯ ಹೆಸರನ್ನು ಹೇಳಿ ಚಪ್ಪಾಳೆ ತಟ್ಟಿರಿ. ನಿಮ್ಮ ಪಾಪ ದುಃಖ ಎಲ್ಲವೂ ಪಲಾಯನವಾಗುವುದು. ನೀವು ಮರದ ಕೆಳಗೆ ನಿಂತು ಚಪ್ಪಾಳೆ ತಟ್ಟಿದರೆ ಅದರಮೇಲೆ ಕುಳಿತ ಹಕ್ಕಿಗಳು ಹಾರಿಹೋಗುತ್ತವೆ ನೀವು ಹರಿಯ ಹೆಸರನ್ನು ಹೇಳುತ್ತ ಚಪ್ಪಾಳೆ ತಟ್ಟಿದರೆ ಕೆಟ್ಟ ಆಲೋಚನೆಯೆಂಬ ಹಕ್ಕಿಗಳು ನಿಮ್ಮ ದೇಹವೆಂಬ ಮರದಿಂದ ಓಡಿಹೋಗುವುವು.

೨ ಹಿಂದಿನ ಕಾಲದಲ್ಲಿ ಸಾಧಾರಣ ಜ್ವರ ಬರುತ್ತಿತ್ತು. ಆಗ ಕೆಲವು ಕಷಾಯಗಳನ್ನು ತೆಗೆದುಕೊಂಡರೆ ಗುಣವಾಗುತ್ತಿತ್ತು ಈಗಿನ ಜ್ವರ ಮಲೇರಿಯಾ ರೋಗದ್ದು ಅದಕ್ಕೆ 'ಡಿ. ಗುಪ್ತ' ವೈದ್ಯನ ಬಲವಾದ ಕಷಾಯವೇ ಬೇಕು ಅದನ್ನು ಗುಣಮಾಡುವುದಕ್ಕೆ. ಹಿಂದಿನ ಕಾಲದಲ್ಲಿ ಜನರು ಯಾವಾಗಲೂ ಭಕ್ತಿಯಲ್ಲಿ ನಿರತರಾಗಿದ್ದರು. ಶಾಸ್ತ್ರೋಕ್ತವಾಗಿ ಹಲವು ಕೆಲಸಗಳನ್ನು ಮಾಡುತ್ತಿದ್ದರು. ಆದರೆ ಕಲಿಯುಗದಲ್ಲಿ ಪ್ರಾಣ ಅನ್ನಗತವಾಗಿರುವುದು. ಮನಸ್ಸು ಬಹಳ ದುರ್ಬಲ. ಸಂಸಾರ ಬಂಧನದಿಂದ ಪಾರಾಗಲು ಈ ಯುಗಕ್ಕೆ ಯೋಗ್ಯ ವಾದ ಮಾರ್ಗವೆ ಅನವರತವೂ ಮನಸ್ಸನ್ನು ಅವನ ಮೇಲಿರಿಸಿ ಅವನ ನಾಮವನ್ನು ಉಚ್ಚರಿಸುವುದು.

೬. ಅಮೃತದ ಕೊಪ್ಪರಿಗೆಗೆ ಒಬ್ಬನು ಯಾವ ರೀತಿಯಲ್ಲಿ ಬಿದ್ದರೂ ಅವನು ಅಮರನಾಗುವನು. ಹಲವು ಸಾಧನೆಗಳನ್ನು ಮಾಡಿ ಒಬ್ಬನು ಅದರಲ್ಲಿ ಬಿದ್ದರೆ ಅವನು ಅಮರನಾಗುವನು. ಅದರಂತೆಯೆ ಒಬ್ಬನನ್ನು ಅದರಲ್ಲಿ ನೂಕಿದರೂ ಅಮರನಾಗುವನು. ತಿಳಿದೋ ತಿಳಿಯದೆಯೋ ನೀನು ಯಾವ ರೀತಿಯಲ್ಲಾದರೂ ದೇವರ ಹೆಸರನ್ನು ಹೇಳಿದರೂ ಅದನ್ನು ಉಚ್ಚರಿಸಿದ ಪುಣ್ಯ ನಿನಗೆ ಬರುತ್ತದೆ.

೭. ಈ ಕಲಿಯುಗದಲ್ಲಿ ದೇವರೊಂದಿಗೆ ಸಂಬಂಧ ಕಲ್ಪಿಸಿಕೊಳ್ಳುವುದಕ್ಕೆ ನಾರದರಿಂದ ಹೇಳಲ್ಪಟ್ಟಿರುವ ಭಕ್ತಿ, ಪ್ರೇಮ, ಶರಣಾಗತಿ ಯೋಗ್ಯವಾದ ಮಾರ್ಗ. ಹಿಂದಿನ ಯುಗಗಳಲ್ಲಿ ಕಠೋರವಾದ ತಪಸ್ಸು ಮುಂತಾದವುಗಳನ್ನು ಮಾಡಬೇಕಾಗಿತ್ತು. ಈ ಯುಗದಲ್ಲಿ ಅವನ್ನು ಜಯಪ್ರದವಾಗಿ ಮಾಡಲಾಗುವುದಿಲ್ಲ. ಮನುಷ್ಯನ ಆಯುಸ್ಸು ಇಂದು ಅಲ್ಪ. ದೇಹಾರೋಗ್ಯವನ್ನು ಹಾಳುಮಾಡುವ ಮಲೇರಿಯಾ ರೋಗವನ್ನು ಹೇಳಬೇಕಾಗಿಯೆ ಇಲ್ಲ. ಇನ್ನು ತುಂಬ ಕಠಿಣವಾದ ಸಾಧನೆಯನ್ನು ಹೇಗೆ ಮಾಡಬಲ್ಲನು?

---

# ಧಾರ್ಮಿಕ ಬೋಧನೆ

೧. ಮಹಾತ್ಮರಿಗೆ ಹುಟ್ಟಿದ ದೇಶದಲ್ಲಿ ಗೌರವವಿಲ್ಲ. ಅವರೆ ಬೇರೆ ದೇಶದವರು ಗೌರವಿಸುವರು. ಏತಕ್ಕೆ? ದೊಂಬರಾಟ ಮಾಡುವವನ ನಂಟರು ಅವನ ಆಟವನ್ನು ನೋಡುವುದಕ್ಕೆ ನೆರೆಯುವುದಿಲ್ಲ. ಆದರೆ ದೂರದಲ್ಲಿರುವ ಅಪರಿಚಿತರಾದವರೋ, ಅವನ ಅದ್ಭುತವಾದ ತಮಾಷೆಯನ್ನು ನೋಡಿ ಆಶ್ಚರ್ಯಚಕಿತರಾಗುವರು.

೨. ಬೂರಗದ ಮರದ ಬೀಜ ಅದರ ಅಡಿಯಲ್ಲಿ ಬೀಳುವುದಿಲ್ಲ. ಅವು ಗಾಳಿಯಿಂದ ದೂರಕ್ಕೆ ಒಯ್ಯಲ್ಪಟ್ಟು ಅಲ್ಲಿ ಮೊಳಕೆಯಾಗುವುವು. ಇದರಂತೆಯೇ ಮಹಾಪುರುಷನ ಶಕ್ತಿಯೂ ಕೂಡ ದೂರದಲ್ಲಿ ವ್ಯಕ್ತವಾಗುವುದು. ಅಲ್ಲ ಅದನ್ನು ಮೆಚ್ಚುವರು.

೩. ದೂರಕ್ಕೆ ದೀಪ ಬೆಳಕನ್ನು ಕೊಟ್ಟರೂ ಅದರ ಕೆಳಗೆ ಯಾವಾಗಲೂ ನೆರಳು ಅದರಂತೆಯೇ ಮಹಾತ್ಮರ ಹತ್ತಿರ ಇರುವವರಿಗೆ ಅವರ ಮಹಾತ್ಮ್ಯೆ ತಿಳಿಯುವುದಿಲ್ಲ ಯಾರು ದೂರದಲ್ಲಿ ಇರುವರೋ ಅವರು ಇವನ ಮಹಾತ್ಮ್ಯೆಗೆ ಮುಗ್ಧರಾಗುವರು

೪ ಮತ್ತೊಬ್ಬನನ್ನು ಕೊಲ್ಲಬೇಕಾದರೆ ಕತ್ತಿ ಗುರಾಣಿ ಆವಶ್ಯಕ ಆತ್ಮಹತ್ಯೆ ಮಾಡಿಕೊಳ್ಳಬೇಕಾದರೆ ಒಂದು ಗುಂಡು ಸೂಜಿ ಸಾಕು ಇದರಂತೆಯೆ ಮತ್ತೊಬ್ಬನಿಗೆ ಕಲಿಸಬೇಕಾದರೆ ಹಲವು ಧರ್ಮ ಗ್ರಂಥಗಳನ್ನು ಓದಬೇಕು ಬೇಕಾದಷ್ಟು ಚರ್ಚೆ ಮಾಡಬೇಕು

೫ ನಾನು ಹುಟ್ಟಿದ ಊರಿನ ಕಡೆ ರಾಸಿಯಾಗಿ ಬಿದ್ದಿರುವ ದವಸವನ್ನು ಅಳೆಯುತ್ತಿರುವವರನ್ನು ನೀವು ನೋಡಬಹುದು ಒಬ್ಬ ಅಳೆಯುತ್ತಾ ಹೋಗುವನು ಅದು ಇನ್ನೇನು ಮುಗಿಯಿತು ಎನ್ನುವ ಹೊತ್ತಿಗೆ ಮತ್ತೊಬ್ಬ ಹಿಂದಿನಿಂದ ಅವನಿಗೆ ಸಿಲುಕುವಂತೆ ದವಸವನ್ನು ನೂಕುವನು ಇದರಂತೆಯೆ ನಿಜವಾದ ಭಕ್ತನಿಗೆ ದೇವರಿಗೆ ಸಂಬಂಧಪಟ್ಟ ವಿಷಯದ ಅಭಾವವಿರುವುದಿಲ್ಲ ಅಂತರಂಗದಿಂದ ಅನವರತವೂ ಹೊಸ ಹೊಸ ಭಾವವನ್ನು ಹೊಂದುವನು ಅದೆಂದಿಗೂ ಕೊನೆಗಾಣುವುದಿಲ್ಲ

೬ ಕಟ್ಟಿಗೆ ಮುಂತಾದುವುಗಳನ್ನು ಸೇರಿಸಿ ಒಬ್ಬನು ಬೆಂಕಿ ಹಚ್ಚಿಸಿದರೆ ಅನೇಕರು ಬೆಂಕಿಯನ್ನು ಕಾಯಿಸಿಕೊಳ್ಳುವಂತೆ, ತುಂಬಾ ಕಷ್ಟಪಟ್ಟು ತಪಸ್ಸುಮಾಡಿ ದೇವರನ್ನು ಕಂಡವರೊಡನೆ ಬೆರೆತು ಅವರು ಹೇಳಿದಂತೆ ಕೇಳುವುದರಿಂದ ಅನೇಕರು ದೇವರ ಮೇಲೆ ಮನಸ್ಸನ್ನು ಇಡುತ್ತಾರೆ

೭. ನಿಜವಾದ ಬೋಧನೆ ಯಾವುದು? ಇನ್ನೊಬ್ಬನಿಗೆ ಬೋಧನೆ ಮಾಡುವುದಕ್ಕಿಂತ ಸುಮ್ಮನೆ ದೇವರನ್ನು ಪೂಜೆಮಾಡಿದರೆ ಅದೇ ಸಾಕಾದಷ್ಟು ಬೋಧನೆಯನ್ನು ಮಾಡಿದಂತೆ ಆಯಿತು ತಾನು ಮುಕ್ತನಾಗಲು ಯಾರು ಯತ್ನಿಸುವನೊ ಅವನೇ ನಿಜವಾದ ಬೋಧಕ ಯಾರು ಮುಕ್ತರಾಗಿರುವರೊ ಅವರೆಡೆಗೆ ನೂರಾರು ಮಂದಿ ಹಲವು ಕಡೆಗಳಿಂದ ಬರುತ್ತಾರೆ. ಅವರು ಎಲ್ಲಿಂದ ಬರುವರು ಎಂಬುದು ಕೂಡ ಗೊತ್ತಿರುವುದಿಲ್ಲ. ಬಂದು ಉಪದೇಶವನ್ನು ಸ್ವೀಕರಿಸುತ್ತಾರೆ. ಮೊಗ್ಗು ಅರಳಿದರೆ ಕರೆಸಿಕೊಳ್ಳದೆ ದುಂಬಿಗಳು ನಾನಾ ಕಡೆಗಳಿಂದ ಬರುತ್ತವೆ.

# ವಿವಿಧ ವಚನ

೧. ಕಲ್ಕತ್ತೆಯ ಪ್ರಖ್ಯಾತ ಶ್ರೀಮಂತನೊಬ್ಬ ಶ್ರೀರಾಮಕೃಷ್ಣರ ದರ್ಶನಾರ್ಥವಾಗಿ ಬಂದನು. ಸಂಭಾಷಣೆಯಲ್ಲಿ ಹಲವು ಕುಟಿಲ ವಾದಗಳನ್ನು ತಂದನು. ಶ್ರೀರಾಮಕೃಷ್ಣರು, ನಿರರ್ಥಕವಾದದಿಂದ ಏನು ಪ್ರಯೋಜನ, ಸರಳ ಮನಸ್ಸಿನಿಂದ ಶ್ರದ್ಧೆಯಿಂದ ದೇವರನ್ನು ಪ್ರಾರ್ಥಿಸು, ಅದರಿಂದ ನಿನಗೆ ಒಳ್ಳೆಯದಾಗುವುದು ಎಂದರು. ಆ ಅಹಂಕಾರಿಯಾದ ದರ್ಶನಾರ್ಥಿಯು ಇದನ್ನು ಒಳ್ಳೆಯ ದೃಷ್ಟಿಯಲ್ಲಿ ತೆಗೆದುಕೊಳ್ಳಲಿಲ್ಲ. ಪುನಃ ಅವರನ್ನು ಎಲ್ಲವನ್ನೂ ತಿಳಿದುಕೊಳ್ಳುವುದಕ್ಕೆ ನಿಮಗೆ ಸಾಧ್ಯವಾಯಿತೆ ಎಂದು ಪ್ರಶ್ನಿಸಿದನು. ಶ್ರೀರಾಮಕೃಷ್ಣರು ಅತ್ಯಂತ ವಿನಯದಿಂದ ಕೈಯನ್ನು ಮುಗಿದು "ನನಗೆ ಏನನ್ನು ತಿಳಿದುಕೊಳ್ಳುವುದಕ್ಕೂ ಸಾಧ್ಯವಾಗಲಿಲ್ಲ ನಿಜ. ಆದರೆ ಪರಕೆ ತಾನು ಅಶುದ್ಧವಾದರೂ ಗುಡಿಸುವ ಸ್ಥಳವನ್ನು ಶುದ್ಧಮಾಡುವುದು" ಎಂದರು.

೨. ಶ್ರೀರಾಮಚಂದ್ರನು ಕಾಡಿನಲ್ಲಿ ಪ್ರಯಾಣಮಾಡುತ್ತಿದ್ದಾಗ ನೆಲದ ಮೇಲೆ ಬಾಣ ಮತ್ತು ಬಿಲ್ಲನ್ನು ನೆಟ್ಟು ಪಂಪಾಸರೋವರದಲ್ಲಿ ನೀರನ್ನು ಕುಡಿಯಲು ಇಳಿದನು. ಬಂದಮೇಲೆ ಒಂದು ಕಪ್ಪೆಗೆ ಬಿಲ್ಲಿನಿಂದ ಗಾಯವಾಗಿ ರಕ್ತ ಮೈಮೇಲೆಲ್ಲ ಇದ್ದುದನ್ನು ಕಂಡನು. ಶ್ರೀರಾಮಚಂದ್ರನಿಗೆ ತುಂಬಾ ವ್ಯಸನವಾಗಿ ಕಪ್ಪೆಗೆ "ನೀನು ಏತಕ್ಕೆ ಏನಾದರೂ ಶಬ್ದಮಾಡಲಿಲ್ಲ, ಆಗ ನನಗೆ ನೀನು ಇಲ್ಲಿ ಇರುವುದು ಗೊತ್ತಾಗುತ್ತಿತ್ತು. ನಿನಗೆ ಈ ವಿಪತ್ತು ಬರುತ್ತಿರಲಿಲ್ಲ" ಎಂದನು. ಅದಕ್ಕೆ ಕಪ್ಪೆ, "ನಾನು ಅಪಾಯದಲ್ಲಿ ಬಿದ್ದಾಗ, ಶ್ರೀರಾಮ ನನ್ನನ್ನು ಕಾಪಾಡು! ಎಂದು ನಿನಗೆ ಮೊರೆಯಿಡುತ್ತೇನೆ. ಈಗ ನೀನೇ ನನ್ನನ್ನು ಕೊಲ್ಲುತ್ತಿರುವಾಗ ಇನ್ನು ಯಾರನ್ನು ಬೇಡಲಿ" ಎಂದಿತು.

೩. ಪತಿವ್ರತೆಯಾದ ಹೆಂಗಸೊಬ್ಬಳು ಪ್ರೀತಿಯಿಂದ ತನ್ನ ಗಂಡ ಮತ್ತು ಮಕ್ಕಳನ್ನು ನೋಡಿಕೊಳ್ಳುತ್ತ ಅದೇ ಕಾಲದಲ್ಲಿ ದೇವರ ಮೇಲೆ ತನ್ನ ಮನಸ್ಸನ್ನು ಇಟ್ಟಿದ್ದಳು. ತನ್ನ ಗಂಡನ ಕಾಲಾನಂತರ ಅಂತ್ಯಕ್ರಿಯೆಯಾದ ಮೇಲೆ ತನ್ನ ಗಾಜಿನ ಬಳೆಯನ್ನು ಒಡೆದುಹಾಕಿ ಚಿನ್ನದ ಬಳೆಯನ್ನು ಹಾಕಿಕೊಂಡಳು. ಜನರಿಗೆ ಇಂತಹ ಅಸ್ವಭಾವಿಕ ನಡತೆ

ಯನ್ನು ನೋಡಿ ಆಶ್ಚರ್ಯವಾಯಿತು. ಅದಕ್ಕೆ ಈಕೆ ಹೇಳಿದಳು "ಇಲ್ಲಿಯವರೆಗೂ ನನ್ನ ಗಂಡನ ಶರೀರ ಗಾಜಿನಂತೆ ನಶ್ವರವಾಗಿತ್ತು. ಆ ನಶ್ವರ ಜೀವನ ಹೋಯಿತು. ಈಗ ಅವನು ನಿರಾಕಾರನಾಗಿ ಎಲ್ಲಾ ವಿಧದಿಂದಲೂ ಪ್ರಾಣನಾಗಿರುವನು. ಅವನ ದೇಹ ಇನ್ನು ನಶ್ವರವಲ್ಲ. ಅದಕ್ಕೇ ನಾನು ಬೇಗ ಒಡೆದು ಹೋಗುವಂತಹ ಗಾಜಿನ ಬಳೆಯನ್ನು ಬಿಟ್ಟು ಚಿನ್ನದ ಬಳೆಯನ್ನು ಹಾಕಿಕೊಂಡಿರುವುದು."

೪ ಗಂಗಾನದಿಯ ನೀರನ್ನು ಬರೀ ನೀರೆಂದು, ಬೃಂದಾವನದ ಮಣ್ಣನ್ನು ಬರೀ ಮಣ್ಣೆಂದು, ಅಥವಾ ಜಗನ್ನಾಥ ದೇವರ ಮಹಾಪ್ರಸಾದವನ್ನು ಅನ್ನವೆಂದು ತಿಳಿಯಬಾರದು. ಇವು ಮೂರೂ ಕೂಡ ಪರಮಾತ್ಮನ ಪ್ರತ್ಯಕ್ಷ ಆವಿರ್ಭಾವನೆ.

ಪಂಡಿತನಿಂದ ಪಾಮರನವರೆಗೆ ರುಚಿಸುವ ಆಧ್ಯಾತ್ಮಿಕ ಉಪದೇಶಗಳಿವು. ಜಗದ ಕಷ್ಟನಷ್ಟಗಳ ಆಘಾತಕ್ಕೆ ಸಿಕ್ಕಿ ಜೀವ ತಲ್ಲಣಿಸುವಾಗ, ಜೀವನಕ್ಕೆ ಒಂದು ಊರುಗೋಲಾಗಿ, ದಾರಿ ಬೆಳಕಾಗಿ, ಪರಮಗುರಿಯಾದ ಭಗವಂತ ನಡಿದಾವರೆಯ ಎಡೆಗೆ ಸಾಗುವುದಕ್ಕೆ ತಕ್ಕ ಆಧ್ಯಾತ್ಮಿಕ ಶಕ್ತಿಯನ್ನು ಒದಗಿಸಿ ಕೊಡಬಲ್ಲುದು ಅವರ ಅಮರ ವಾಣಿ.

# ಶ್ರೀ ರಾಮಕೃಷ್ಣಾಶ್ರಮದ ಪ್ರಕಟನೆಗಳು

| | | | | |
|---|---|---|---|---|
| ಸ್ವಾಮಿ ವಿವೇಕಾನಂದ (ಕುವೆಂಪು) | | ೩ | ೮ | ೦ |
| ಪತ್ರಮಾಲೆ | .... .... | ೩ | ೦ | ೦ |
| ಶ್ರೀ ಶಾರದಾದೇವಿ | ... .... | ೨ | ೦ | ೦ |
| ಶ್ರೀ ರಾಮಕೃಷ್ಣ | .... .... | ೧ | ೮ | ೦ |
| ರಾಜಯೋಗ | .... ... | ೨ | ೧೦ | ೦ |
| ಕರ್ಮಯೋಗ | .... .... | ೧ | ೮ | ೦ |
| ಭಕ್ತಿಯೋಗ | ... .... | ೧ | ೦ | ೦ |
| ತ್ರಿವೇಣೀ | .... .... | ೧ | ೦ | ೦ |
| ಶ್ರೀ ಗುರುದೇವರ ವಚನ | .... .... | ೧ | ೦ | ೦ |
| ಶ್ರೀ ರಾಮಕೃಷ್ಣ ಉಪನಿಷತ್ | .... | ೧ | ೪ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ | .... | ೧ | ೪ | ೦ |
| ವಿದ್ಯಾಭ್ಯಾಸ | .... .... | ೦ | ೧೦ | ೦ |
| ಹಿಂದೂ ಧರ್ಮಸಾರ | .... .... | ೦ | ೧೦ | ೦ |
| ವರ್ತಮಾನ ಭಾರತ | .... .... | ೦ | ೧೦ | ೦ |
| ವಿವೇಕವಾಣಿ | .... .... | ೦ | ೧೦ | ೦ |
| ನನ್ನ ಗುರುದೇವ | .... .... | ೦ | ೮ | ೦ |
| ಚಿಕಾಗೊ ಉಪನ್ಯಾಸ | .... .... | ೦ | ೬ | ೦ |
| ಆರತಿ .... | .... .... | ೦ | ೪ | ೦ |
| ನನ್ನ ಜೀವನ ಮತ್ತು ಧ್ಯೇಯ | .... | ೦ | ೪ | ೦ |
| ಈಶ್ವರಾನುರಾಗ | .... .... | ೦ | ೪ | ೦ |
| ನೊಂದ ಜೀವಕ್ಕೆ ಭರವಸೆ | .... .... | ೦ | ೪ | ೦ |
| ಭಾರತ ಮಹಿಳೆ | .... .... | ೦ | ೪ | ೦ |
| ಕರ್ಮರಹಸ್ಯ | .... .... | ೦ | ೪ | ೦ |
| ಸಾಧನ .... | .... .... | ೦ | ೪ | ೦ |
| ಶ್ರೀ ರಾಮಕೃಷ್ಣ ಲೀಲಾಪ್ರಸಂಗ (ಗುರುಭಾವ) | | ೩ | ೦ | ೦ |
| ನಾಗಮಹಾಶಯ | .... .... | ೧ | ೮ | ೦ |
| ದಿವ್ಯವಾಣಿ | .... .... | ೨ | ೦ | ೦ |
| ಶ್ರೀ ರಾಮಕೃಷ್ಣ ವಚನಾಮೃತ ಭಾಗ ೧ | .... | ೨ | ೦ | ೦ |
| ,, ,, ಭಾಗ ೨ | .... | ೨ | ೦ | ೦ |
| Drig Drishya Viveka | .... .... | 2 | 0 | 0 |
| Mandukya Upanishad with Goudapada karika | | 8 | 0 | 0 |